# ತ್ರೈತಾರಾಧನೆ



ರಚಿತ : ತ್ರಿಮತ ಏಕೈಕ ಗುರುವು


ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು



www.thraithashakam.org



# ತ್ರೈತಾರಾಧನೆ


<u>ರಚಿತ</u>

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (72) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

---

ತೆಲುಗುನಿಂದ ಕನ್ನಡಕ್ಕೆ ಅನುವಾದಕರು

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**


---


<u>ಗ್ರಂಥ ಮುದ್ರಣ</u>

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಜುಲೈ–2016

ಪ್ರತಿಗಳು : 1000 **ಬೆಲೆ. 50/–**

## ಇಂದೂ ಜ್ಞಾನವೇದಿಕೆ ಪ್ರಚರಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ–ಉತ್ತರಗಳು.
03. ಧರ್ಮ–ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ–ಅಸತ್ಯವಾ?)
06. ದೆವ್ವಗಳಹಾಗೂ–ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ–ಮಹಿಮೆ (ಸತ್ಯವಾ–ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ– ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ–ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ–ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು–963.
38. ಮತ–ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು–ಆಸ್ತಿಕರು.
44. ಹೇತುವಾದ–ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಚರಣೆಗಳು

54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ – ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಇಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.



# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಟಿ–ಸೃಷ್ಟಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು–
    ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ–
    ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
    ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
    ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
    ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
    ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
    ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ – ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ– ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು– ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು– ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು– ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ ಮಹೇಂದ್ರಜಾಲ, ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು– ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು– ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.



# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : **ಶ್ರೀನಿವಾಸ**–09705864675, **ಲಕ್ಷ್ಮೀನಾರಾಯಣಾಚಾರಿ**–09440556968.

**ವೆಂಕಟೇಶ್**–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**

ಶ್ರೀಕೃಷ್ಣಾ ಮೆಡಿಕಲ್ಸ್, ಪಟೇಲ್‌ನಗರ್, 3ನೇ ರಸ್ತೆ, ಹೊಸಪೇಟೆ, ಬಳ್ಳಾರಿ (ಜಿಲ್ಲೆ). K.A

Cell:9611133635, 9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**

ಪ್ರಬೋಧಾ ನಿಲಯ. ರಿಂಗ್ ರೋಡ್, ಮರಲೂರು, ತುಮಕೂರು (ಜಿ).

ಪಿನ್–572150, Cell : 9448177812

**ಶಿವರಾಜ**

(ಸಾ)(ಕಿ) ಕುಕನೂರು (ಪೊ)

ಚಿಕ್ಕಸೂಗುರು (ತಾ), ರಾಯಚೂರು (ಜಿ)

Cell : 98443 69516

**R.S. ವೀರಾಚಾರಿ**

ಕತ್ತರಗುಪ್ಪೆ, ವಾರ್ಡ್.ನೆಂ.–38,

ಬೆಂಗಳೂರು–560085

Cell : 9036982829

**G. ಮನೋಹರ್**

ಮಲ್ಲಸಂದ್ರ, ಟಿ. ದಾಸರಹಳ್ಳಿ

ಬೆಂಗಳೂರು–560057

Cell : 7411459912, 9448452963.

**B. ವಾತ್ಸಲ್ಯ**

ರೈಲ್ವೇ ಸ್ಟೇಷನ್ ಹತ್ತಿರ,

ಪಿ.ಬಿ.ರೋಡ್, ದಾವಣಗೆರೆ–577002

Cell : 9901534677, 8880666529

**ಬಸವರಾಜ ಅಂಗಡಿ**

(ಸಾ) (ಪೊ) ಪೋತ್ನಾಳ,

(ತಾ) ಮಾನವಿ, ರಾಯಚೂರು (ಜಿ)

Cell : 9632418716

**ಸೂರ್ಯ ಪ್ರಕಾಶ**

ಟೈಪ್ 'ಸಿ' (ಸಾ) (ಪೊ) ಶಕ್ತಿನಗರ

(ತಾ), ರಾಯಚೂರು (ಜಿ)

Cell : 9611183107, 9164886981

**ಲೀಲಾವತಿ**

ಮಾರುತಿ ಟೆಂಟ್ ರೋಡ್, ಚಾಮರಾಜ ಮೊಹಲ್ಲ, ಮೈಸೂರ್–547097

Cell : 9986369118

**T.V. ರಮಣ**

ಕತ್ತರಗುಪ್ಪೆ, ವಾರ್ಡ್.ನೆಂ. –38,

ಬೆಂಗಳೂರು–560068

Cell : 08970772028, 07411459912, 07406039453

**M. ನಾರಾಯಣರೆಡ್ಡಿ**

(Bsc census department retired supervisor)

ರಾಮಗುಂಡನಲ್ಲಿ ಪೋಸ್ಟ್, ವೈಟ್ ಫೀಲ್ಡ್ ರೋಡ್,

ಬೆಂಗಳೂರು–560066

Cell : 9482516023

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

ತಪ್ಪದೆ ಓದಿರಿ!                ಓದಿಸಿರಿ!!

### ಪ್ರಥಮ ದೈವ ಗ್ರಂಥ

# ತ್ರೈತ ಸಿದ್ಧಾಂತ ಭಗವದ್ಗೀತೆ

**(578 ಶ್ಲೋಕಗಳ ವಚನ ಗ್ರಂಥ)**

ಇದು ಆಧ್ಯಾತ್ಮಿಕ ವಿದ್ಯೆಯಲ್ಲಿ ವಿಪ್ಲವಾತ್ಮಕ ತಿರುವು ತಿರುಗಿದ ಭಗವದ್ಗೀತೆ. 55 ಶ್ಲೋಕಗಳಿಗೆ ಪೂರ್ತಿ ಭಾವ ಬದಲಾವಣೆಯೊಂದಿಗೆ ತಯಾರಾಗಿದೆ. ಮೂರು ಆತ್ಮಗಳನ್ನು ಕುರಿತು ಶಾಸ್ತ್ರಾಧಾರದಿಂದ ವಿವರಿಸಿ ಬೋಧಿಸಿದ ಮೊಟ್ಟ ಮೊದಲ ಭಗವದ್ಗೀತೆ. ಮೊದಲು ಎಷ್ಟೋ ಜನರು ಬರೆದ ಭಗವದ್ಗೀತೆಗಳಿಗೆ ನೂರಕ್ಕೆ 90ರಷ್ಟು ವಿಭಿನ್ನ ಭಾವಗಳಿಂದ ಕೂಡಿಕೊಂಡಿದೆ. ಎಷ್ಟೋ ಪ್ರತ್ಯೇಕ ಅರ್ಥಗಳೊಂದಿಗೆ ದೇವರು ಹೇಳಿದ ನಿಜ ಭಾವಗಳನ್ನು ಹೇತುಬದ್ಧವಾಗಿ ವಿವರಿಸಿರುವುದು ಮತ್ತು ಹೇತುವಾದಿಗಳು ಸಹ ಖಂಡಿಸಲಾರದ ಭಗವದ್ಗೀತೆ ಇದು ಒಂದೇ. ಗರ್ಭಸ್ಥ ಶಿಶುವಿಗೆ ಪ್ರಾಣ ಇಲ್ಲ ಎನ್ನುವುದು, ಹತ್ಯೆಯನ್ನು ವಿವರಿಸಿ ಆತ್ಮಹತ್ಯೆಯಾಗಿ ಹಾಗೆಯೇ ಆತ್ಮಹತ್ಯೆಯನ್ನು ಹತ್ಯೆಯಾಗಿ ಹೇಳುವುದು, ಇಂತಹವು ಬಹಳ ಜನರಿಗೆ ಸಹಿಸಿಕೊಳ್ಳಲಾರದಂತಹ ವಿಪ್ಲವಾತ್ಮಕ ಹಾಗೂ ಸಂಚಲನ ವಿಷಯಗಳೆಷ್ಟೋ ಈ ಗ್ರಂಥದಲ್ಲಿ ಇವೆ. ಶ್ರೀಕೃಷ್ಣನ ಯಥಾರ್ಥ ಭಾವವನ್ನು ತಿಳಿಸಿ, ವಾಸ್ತವ ಜ್ಞಾನ ಪಥದಲ್ಲಿ ನಡೆಸಿ, ಮೋಕ್ಷಗಮ್ಯವನ್ನು ಸೇರಿಸುವುದು ಈ ಗ್ರಂಥ ರಾಜ.

**ರಚಿತ : ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಆರಾಧನೆ



ಒಬ್ಬ ಮನುಷ್ಯ ತನ್ನ ಉದ್ದೇಶದಲ್ಲಿ ಬೆಲೆಯುಳ್ಳದಕ್ಕೋಸ್ಕರ ವಿಚಾರಿಸುವುದು ಇಲ್ಲವೆ ಶೋಧಿಸುವುದು ಜಗತ್ತಿನಲ್ಲಿ ನಡೆಯುವ ವಿಷಯವೇ. ಬೆಲೆಯುಳ್ಳದ್ದು ಏನಾದರು ಅದು ಧನ (ಹಣ) ದೊಂದಿಗೆ ಸಮಾನವೇ. ಬೆಲೆಯುಳ್ಳದ್ದು ಏನಾದರೆ ಇದೆಯೊ, ಅದು ಎಲ್ಲಿ ಲಭಿಸುತ್ತದೊ, ಯಾರಹತ್ತಿರ ಲಭಿಸುತ್ತದೊ ತಿಳಿದು, ಅದಕ್ಕೋಸ್ಕರ ಸ್ವಲ್ಪ ಕಾರ್ಯ ಇಲ್ಲವೆ ಸ್ವಲ್ಪ ಶ್ರಮ ಪಡಬೇಕಾಗಿರುತ್ತದೆ. ಅಂತಹ ಕಾರ್ಯಕ್ಕೆ ಒಂದು ಪ್ರತ್ಯೇಕವಾದ ಹೆಸರು ಇದೆ. ಅದನ್ನೇ "ಆರಾಧನೆ" ಎನ್ನುತ್ತಿದ್ದೇವೆ. ಮನುಷ್ಯರಲ್ಲಿ ಎಷ್ಟೋ ವಿಧಗಳಾದ ಆರಾಧನೆಗಳು ಇವೆ. ಏನನ್ನಾದರು ಧನವಾಗಿ ಭಾವಿಸಿ ಅದಕ್ಕೋಸ್ಕರ ಶೋಧಿಸುವುದನ್ನು ಆರಾಧನೆ ಎನ್ನುತ್ತಿದ್ದೇವೆಂದು ಹೇಳಿಕೊಂಡಿದ್ದೇವೆ ಅಲ್ಲವೆ! ಈಗ ಒಂದು ಆರಾಧನೆಯನ್ನು ಉದಾಹರಣೆಯಾಗಿ ನೋಡೋಣ. ಒಬ್ಬನು ಮತ್ತೊಬ್ಬ ಮನುಷ್ಯನೊಂದರ ಸ್ನೇಹವನ್ನು ಬೇಕೆಂದುಕೊಂಡಿದ್ದಾನೆ. ಆಗ ಅವನ ದೃಷ್ಠಿಯಲ್ಲಿ  ಆ ಸ್ನೇಹ ಬೆಲೆಯುಳ್ಳದ್ದು. ಮತ್ತೊಬ್ಬ ಮನುಷ್ಯನ ಸ್ನೇಹವನ್ನು ಕೋರಿದ ಮನುಷ್ಯ ಆ ಸ್ನೇಹವನ್ನು ಸಂಪಾದಿಸಿಕೊಳ್ಳುವುದಕ್ಕೆ ಸ್ವಲ್ಪ ಪ್ರಯತ್ನವನ್ನು ಮಾಡಬೇಕಾಗಿರುತ್ತದೆ. ಆ ಪ್ರಯತ್ನ ಕಾರ್ಯರೂಪದಲ್ಲಿರುತ್ತದೆ. ಅಂತಹ ಕಾರ್ಯದಲ್ಲಿ ಎದುರಾದ ಮನುಷ್ಯ ಕಾಣಿಸಿದಾಗ ಗೌರವವಾಗಿ ಮಾತನಾಡಿಸು ವುದು, ಆ ಮನುಷ್ಯನಿಗೆ ಇಷ್ಟವಾದ ಕೆಲಸಗಳು ಮಾಡುವುದೂ, ಆ ಮನುಷ್ಯನ ಸ್ನೇಹಕ್ಕೆ ಅವಶ್ಯಕತೆ ಇರುವಂತೆ ನಡೆದುಕೊಳ್ಳುವುದು ಮೊದಲಾದ ಕಾರ್ಯ ಗಳಿರುತ್ತವೆ. ಅಂತಹ ಕಾರ್ಯಗಳನ್ನೇ 'ಸ್ನೇಹಾ ಆರಾಧನೆ'  ಎನ್ನುತ್ತಿದ್ದೇವೆ. ಅದೇ ರೀತಿ ಪ್ರೇಮಾರಾಧನೆ ಇದೆ. ಪ್ರೇಮಾರಾಧನೆಯಲ್ಲಿ ಪ್ರೇಮವೇ ಅವನಿಗೆ ಬೆಲೆಯಾದದ್ದು. ಆದ್ದರಿಂದ ಪ್ರೇಮ+ಆರಾಧನೆ=ಪ್ರೇಮಾರಾಧನೆ ಎನ್ನುತ್ತಿದ್ದೇವೆ. ಈ ಸೂತ್ರದ ಪ್ರಕಾರ ಸಂಬಳ ರೂಪದಲ್ಲಿ ಬರುವ ಧನಕ್ಕೋಸ್ಕರ ಉದ್ಯೋಗ ಮಾಡುವವನು ಸಹ ಆರಾಧನೆ ಮಾಡಿದಂತೇ, ಆದ್ದರಿಂದ ಕೆಲವರಿಗೆ ಅವರ ವೃತ್ತಿಯೇ ಅವರಿಗೆ ಆರಾಧನೆ ಎನ್ನುತ್ತಿದ್ದೇವೆ.

ಭೂಮಿ ಮೇಲೆ ಒಬ್ಬ ಮನುಷ್ಯ ಒಂದು ಬೆಲೆಯುಳ್ಳದಕ್ಕೋಸ್ಕರ ಮಾಡುವ ಪ್ರತಿ ಕಾರ್ಯ ಒಂದು ಆರಾಧನೆ ಆದರೆ ಅಂತಹವು ಎಷ್ಟೋ ಆರಾಧನೆಗಳು ಇವೆ. ದೇವತೆಗಳಿಂದ ಮನುಷ್ಯ ಬೆಲೆಯುಳ್ಳದ್ದನ್ನು ಕೋರಿ ಅದಕ್ಕೋಸ್ಕರ ಮಾಡುವ ಕಾರ್ಯವನ್ನು 'ದೇವತಾರಾಧನೆ' ಎನ್ನುತ್ತಿದ್ದೇವೆ. ಜಗತ್ತಿನಲ್ಲಿ ಎಷ್ಟೋ ವಿಧಗಳಾದ ದೇವತಾರಾಧನೆಗಳು ಇವೆ. ಒಂದು ಕ್ಷುದ್ರದೇವತೆಯನ್ನು ಪ್ರಸನ್ನಮಾಡಿಕೊಂಡು ಆ ದೇವತೆಯಿಂದ ತಾನು ಆಶಿಸಿರುವುದು ಪಡೆಯಬೇಕೆಂದು ಆ ದೇವತೆಗೆ ಇಷ್ಟವಾದ ಪ್ರಾಣಿಯನ್ನು ಬಲಿ ಕೊಡುವುದು ಒಂದು ಕಾರ್ಯವಾದರೆ, ಆ ಕಾರ್ಯವನ್ನು 'ಕ್ಷುದ್ರ ದೇವತಾರಾಧನೆ' ಎನ್ನುತ್ತೇವೆ. ಹೀಗೆ ಕ್ಷುದ್ರದೇವತೆಗಳ ಆರಾಧನೆಗಳು ಎಷ್ಟೋ ವಿಧಗಳು ಮತ್ತು ಮಹಾದೇವತೆಗಳ ಆರಾಧನೆಗಳು ಎಷ್ಟೋ ವಿಧಗಳು ಪ್ರಸ್ಥುತ ಕಾಲದಲ್ಲಿ ಸಹ ಇವೆ. ಅದೇ ವಿಧವಾಗಿ ಮನುಷ್ಯರಾಗಿರುವ, ಬದುಕಿರುವ ಬಾಬಾಗಳನ್ನೂ, ಮರಣಿಸಿದ ಸ್ವಾಮೀಜಿಗಳನ್ನು ಆರಾಧಿಸುವುದು ಇದೆ. ಇನ್ನೂ ಹೇಳಿಕೊಂಡರೆ ಸಂತಾನ ಧನವನ್ನು ಆಶಿಸಿ ಹಾವುಗಳನ್ನು, ಆರೋಗ್ಯಧನವನ್ನು ಆಶಿಸಿ ವೃಕ್ಷಗಳನ್ನು ಆರಾಧನೆ ಮಾಡುವುದು ಇದೆ. ದೇಹ ಬಲವನ್ನು ಬೆಲೆಯುಳ್ಳದಾಗಿ ಭಾವಿಸಿದ ಕುಸ್ತಿ ಪಹಿಲ್ವಾನ್‌ರು ಆಂಜನೇಯನನ್ನು, ಕಳ್ಳತನ ಸುಲಭವಾಗಿ ನಡೆಯಬೇಕೆಂದು ಕಳ್ಳರು ಕೃಷ್ಣನನ್ನು, ಓದು ಚೆನ್ನಾಗಿ ಬರಬೇಕೆಂದು ಸರಸ್ವತಿಯನ್ನು, ಶಕ್ತಿ ಬೇಕೆಂದು ಕಾಳಿಕಾದೇವಿಯನ್ನು, ಯುಕ್ತಿ ಬೇಕೆಂದು ವಿಷ್ಣುವನ್ನೂ, ಎಷ್ಟೋ ಜನ ಎಷ್ಟೋ ವಿಧಗಳ ಆರಾಧನೆಗಳು ಮಾಡುತ್ತಿರುತ್ತಾರೆ. **ಇಂತಹ ಆರಾಧನೆಗಳನ್ನೆಲ್ಲ ಸೇರಿಸಿ ಭಗವದ್ಗೀತೆಯಲ್ಲಿ 'ಅನ್ಯ ದೇವತಾರಾಧನೆ' ಎಂದು ಭಗವಂತನು ಹೇಳಿದ್ದಾನೆ.**

ಯೋಗಶಾಸ್ತ್ರವಾದ ಭಗವದ್ಗೀತೆಯನ್ನು ಆಧಾರ ಮಾಡಿಕೊಂಡು ಆರಾಧನೆ ವಿಷಯಗಳನ್ನು ಗಮನಿಸಿದರೆ ಅದರಲ್ಲಿ ಆರಾಧನೆಗಳು ಎರಡು

ವಿಧಗಳಾಗಿ ಇವೆ. ಒಂದು ಜೀವಿಗೆ ಅಶಾಶ್ವಿತವಾದ ಧನವನ್ನು ಒದಗಿಸುವವು. ಎರಡು ಜೀವಿಗೆ ಶಾಶ್ವತವಾದ ಧನವನ್ನು ಒದಗಿಸುವವು. ಪ್ರಕೃತಿವಶವಾದ ಸುಖಗಳನ್ನು ಒದಗಿಸುವ ಆರಾಧನೆಗಳನ್ನು ಕುರಿತು ಹೇಳುತ್ತಾ ಹೋದರೆ ನೂರಾರೂ, ಸಾವಿರಾರೂ, ಲಕ್ಷಗಳೂ ಇವೆ. ಪರಮಾತ್ಮವಶವಾದ ಸುಖವನ್ನು ಕೊಡುವ ಆರಾಧನೆಗಳು ಕೇವಲ ಮೂರೇ ಇವೆ. **ಅವುಗಳನ್ನೇ ಭಗವದ್ಗೀತೆಯಲ್ಲಿ ಒಂದು ಬ್ರಹ್ಮಯೋಗ, ಎರಡು ಕರ್ಮಯೋಗ, ಮೂರು ಭಕ್ತಿಯೋಗ** ಎನ್ನುತ್ತೇವೆ. ಈ ಮೂರು ಯೋಗಗಳನ್ನು ಆಚರಿಸದವರು ಸಹ ಮೂರು ಯೋಗಗಳಿಗೆ ನಮೂನೆಯಾಗಿ ಮೂರು ವಿಧಗಳ ಆರಾಧನೆಗಳನ್ನು, ಮೂರು ದಿನಗಳಲ್ಲಿ, ಮೂರು ಕಾಲಗಳಲ್ಲಿ ಆಚರಿಸುವಂತೆ ಹಿರಿಯರು ತಿಳಿಸಿದ್ದಾರೆ. ಆ ಮೂರು ಆರಾಧನೆಗಳನ್ನೇ **'ತ್ರೈತಾರಾಧನೆ'** ಎನ್ನುತ್ತಿದ್ದೇವೆ. ಪ್ರಪಂಚದಲ್ಲಿನ ಆರಾಧನೆಗಳೆಲ್ಲ ಯೋಗಕ್ಕೆ ಸಂಬಂಧ ಇಲ್ಲದಿರುವವಾಗಿ, ಭೋಗಗಳ ಧನವನ್ನು ಕಾಂಕ್ಷಿಸುವವಾಗಿ ಇವೆ. **ಕೇವಲ ತ್ರೈತಾರಾಧನೆ ಮಾತ್ರ ಜ್ಞಾನ ಧನವನ್ನು ಕೊಟ್ಟು ದೇವರಲ್ಲಿ ಐಕ್ಯ ಮಾಡುತ್ತದೆ. ತ್ರೈತಾರಾಧನೆ ಅಲ್ಲದೆ ಉಳಿದ ಆರಾಧನೆಗಳೆಲ್ಲ ಕರ್ಮಗಳನ್ನು ಉಂಟುಮಾಡಿ ಜನ್ಮಗಳಿಗೆ ಕಳಿಸುವವಾಗಿ ಇವೆ.**

ಚೆನ್ನಾಗಿ ಆಲೋಚಿಸಿದರೆ ಈಗಿನ ಜನರಲ್ಲಿ ದೊಡ್ಡದಾಗಿ ಹೆಸರುವಾಸಿ ಯಾದ ಸ್ವಾಮೀಜಿಗಳಿಗೆ ಆರಾಧನೆ ಒಂದರ ಅರ್ಥ, ವಿಧಾನ ತಿಳಿಯದಂತೆ ಹೋಗಿದೆ. ಇನ್ನು ಸಾಧಾರಣ ಮನುಷ್ಯನನ್ನು ನೋಡಿದರೆ ತಾನೇನು ಮಾಡುತ್ತಿದ್ದಾನೊ ತನಗೇ ತಿಳಿಯದ ಸ್ಥಿತಿಯಲ್ಲಿ ಇದ್ದು ನಾನು ಮಾಡುವುದೆಲ್ಲಾ ಸರಿಯಾದುದೇ ಎಂದುಕೊಳ್ಳುತ್ತಿದ್ದಾನೆ. ಇತ್ತ ಸಾಧಾರಣ ಮನುಷ್ಯನಾಗಲಿ, ಅತ್ತ ಸ್ವಾಮೀಜಿಗಳಾಗಲಿ ನನಗೆ ಎಲ್ಲಾ ತಿಳಿದಿದೆಯೆಂಬ ಗೋಡೆಕಟ್ಟಿಕೊಂಡು ಇರುವುದರಿಂದ ಅವರು ಏನು ಗ್ರಹಿಸಿಕೊಳ್ಳುವ ಸ್ಥಿತಿಯಲ್ಲಿ ಇಲ್ಲ. ಮನುಷ್ಯರಲ್ಲಿ ಅಪರೂಪವಾಗಿ ಕೆಲವರು ಮಾತ್ರ ತನಗೆ ತಿಳಿಯದಿರುವುದು ತಿಳಿದುಕೊಳ್ಳಬೇ

ಕೆಂದುಕೊಂಡರೂ, ಅವರು ಸಹ ದೇವತಾರಾಧನೆ ಮಾಡುವವರನ್ನೇ ಆಶ್ರಯಿಸಿ ಅದೇ ದಾರಿಯಲ್ಲಿ ಹೋಗುವುದು ನಡೆಯುತ್ತಿದೆ. **ಆರಾಧನೆಗಳಲ್ಲಿ ದೊಡ್ಡವೆಂದುಕೊಂಡ ಯಜ್ಞಯಾಗಾದಿಗಳೂ, ಜಪತಪಗಳೂ ತನ್ನನ್ನು ಆರಾಧಿಸುವವು ಅಲ್ಲವೆಂದು ಭಗವದ್ಗೀತೆಯಲ್ಲಿ ದೇವರೇ ಸ್ವತಃ ಹೇಳಿದ್ದರೂ ಆ ವಿಷಯ ತಮಗೆ ತಿಳಿಯದಂತೆ ಹೋಗಿದೆ.** ಪೀಠಾಧಿಪತಿಗಳು, ಮಠಾಧಿಪತಿಗಳು ಸಹಿತ ಬಾಹ್ಯಯಜ್ಞಗಳನ್ನು ಮಾಡುತ್ತಾ ಅಂತರ್ ಯಜ್ಞಗಳನ್ನು ಮರೆತುಹೋಗಿದ್ದಾರೆ. **ಭಗವದ್ಗೀತೆಯಲ್ಲಿ ಹೇಳಿದ ದ್ರವ್ಯಯಜ್ಞ, ಜ್ಞಾನ ಯಜ್ಞಗಳನ್ನು** ಅರ್ಥ ಮಾಡಿಕೊಳ್ಳಲಾಗದೆಹೋಗಿದ್ದಾರೆ. ಇಂತಹ ಸ್ಥಿತಿಯಲ್ಲಿ ಸಾಮಾನ್ಯ ಮಾನವನನ್ನು ಸರಿಯಾದ ಮಾರ್ಗದಲ್ಲಿ ನಡೆಸಿ, ದೇವರ ಸನ್ನಿಧಾನಕ್ಕೆ ಸೇರಿಸುವವರೆ ಅಪರೂಪವಾಗಿದ್ದಾರೆ. ಇಂತಹ ಸಂದರ್ಭದಲ್ಲಿಯೆ ದ್ವಾಪರಯುಗದಲ್ಲಿ ದೇವರು ಭಗವಂತನಾಗಿ ಭೂಮಿಮೇಲಕ್ಕೆ ಬಂದು, ಅನ್ಯ ದೇವತಾರಾಧನೆ ಬಿಟ್ಟು ತನ್ನನ್ನು ಮಾತ್ರ ಆರಾಧಿಸೆಂದು ಭಗವದ್ಗೀತೆಯಲ್ಲಿ ಹೇಳಿದ್ದಾನೆ. ಕೊನೆಗೆ ಯಜ್ಞಗಳು, ದಾನಗಳು, ವೇದಪಠನಗಳು, ತಪಸ್ಸುಗಳು ಸಹ ತನ್ನ ಆರಾಧನೆಗಳು ಅಲ್ಲವೆಂದು, ಅವುಗಳಿಂದ ನನ್ನಹತ್ತಿರಕ್ಕೆ ಸೇರಲಾರರೆಂದು ಹೇಳಿಹೋಗಿದ್ದಾನೆ. ಆ ವಿಷಯ ಪ್ರಜೆಗಳಿಗೆ ತಿಳಿದರೆ ನಮಗಿರುವ ಗೌರವ ಹೋಗುತ್ತದೆಂದು ತಿಳಿದ ಕೆಲವರು ಸ್ವಾಮೀಜಿಗಳು ದೇವರು ಹೇಳಿರುವುದನ್ನು ಪ್ರಜೆಗಳಿಗೆ ತಿಳಿಯದ ಹಾಗೆ ಮಾಡಿದ್ದಾರೆ. ಆದ್ದರಿಂದ ದೇವರ ಜ್ಞಾನವಿಷಯದಲ್ಲಿ ಪ್ರಜೆಗಳು ಎಷ್ಟೋ ನಷ್ಟಹೋದವರಾಗಿದ್ದಾರೆಂದು ಹೇಳಬಹುದು.

ಇದೆಲ್ಲವೂ ಗ್ರಹಿಸಿದ ದೇವರು ತಾನು ಭೂಮಿಮೇಲೆ ಹೇಳಿದ ಧರ್ಮಗಳು ಯಾರಿಗೂ ತಿಳಿಯದಂತೆ ಹೋಗಿವೆ ಎಂದು ತಿಳಿದು, ಅಧರ್ಮಗಳು ಅಡಗಿಹೋಗದಂತೆ ಸಜೀವವಾಗಿ ಇವೆಯೆಂದು ಗ್ರಹಿಸಿ, ಅಧರ್ಮಗಳನ್ನು ಅಡಗಿಸಿ ಧರ್ಮಗಳನ್ನು ವೃದ್ಧಿಮಾಡುವುದಕ್ಕೆ ಪೂರ್ವದಲ್ಲಿದ್ದ ಜ್ಞಾನ ವಿಷಯ

ಗಳನ್ನು ನಮಗೆ ಜ್ಞಾಪಕ ಮಾಡಬೇಕೆಂದುಕೊಂಡಿದ್ದಾನೆ. ಆದ್ದರಿಂದ ಈ ವಿಷಯಗಳನ್ನು ಊಹದ ಮೂಲಕ ನನಗೆ ತಿಳಿಸಿ, ಬರೆಯಿಸಿ ನಿಮಗೆ ತಿಳಿಸುತ್ತಿದ್ದಾನೆ. ಆದ್ದರಿಂದ 'ತ್ರೈತಾರಾಧನೆ' ಎಂಬ ಪುಸ್ತಕದಲ್ಲಿ ಬರೆಯಲ್ಪಟ್ಟಿರುವ ಮೂರು ಆರಾಧನೆಗಳು ದೇವತಾರಾಧನೆಗಳು ಅಲ್ಲವೆಂದು, ದೇವರು ಗೀತೆಯಲ್ಲಿ ತಿಳಿಸಿದ ಮೂರು ಯೋಗಗಳ ಸಾರಾಂಶವೇ ತ್ರೈತಾರಾಧನೆ ಎಂದು ತಿಳಿಯಬೇಕು. ತ್ರೈತಾರಾಧನೆಯನ್ನು ಆಚರಿಸಿದವರು ಮೂರು ಯೋಗಗಳನ್ನು ಆಚರಿಸಿದಂತಾಗುತ್ತದೆ. ಆದ್ದರಿಂದ ದೈವಸನ್ನಿಧಿಯಾದ ಮೋಕ್ಷವನ್ನು ಹೊಂದುವುದಕ್ಕೆ ಮೂರು ಆರಾಧನೆಗಳು ಮೂರು ಸೋಪಾನಗಳಂತಹವೆಂದು ಹೇಳಬಹುದು. ಈ ತ್ರೈತಾರಾಧನೆಯನ್ನು ಓದಿ ಆಚರಿಸದೇ ಹೋದರೂ ಪರವಾಗಿಲ್ಲ, ಆದರೆ ಇದನ್ನು ಕುರಿತು ವಿರುದ್ಧವಾಗಿ ಮಾತನಾಡಿದರೆ ಅದು ತಪ್ಪದೆ ದೈವದೂಷಣೆಯಾಗುತ್ತದೆ. ಯಾರಿಗೂ ತಿಳಿಯದಂತೆ ಹೋಗಿರುವ ತ್ರೈತಾರಾಧನೆಯನ್ನು ಕುರಿತು ಯಾರಿಗಾದರೂ ಹೇಳಿದರೂ, ಈ ಪುಸ್ತಕವನ್ನು ಯಾರಿಗಾದರೂ ದಾನ ಮಾಡಿದರೂ ಅದು ದೇವರ ಕಾರ್ಯವನ್ನು ಮಾಡಿದಂತಾಗುತ್ತದೆ. ಅದು ನಿಜವಾದ ದೇವರ ಸೇವೆಯಾಗುತ್ತದೆ.

ಇಂತಿ

ತ್ರಿಮತ ಐಕ್ಯೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**



# ತ್ರೈತಾರಾಧನೆ

ಗಗನಮ್ ಶೂನ್ಯಮ್ ಎನ್ನುವ ನಾಣ್ನುಡಿ ಎಲ್ಲರೂ ಕೇಳಿಯೇ ಇರುತ್ತಾರೆ. ಅದು ಕೇವಲ ಒಂದು ನಾಣ್ನುಡಿಯೇ ಅಲ್ಲದೆ ನಗ್ನಸತ್ಯ. ವಿವರವಾಗಿ ಹೇಳಿಕೊಂಡರೇ ಗಗನ ಎಂದರೆ ಆಕಾಶ ಎಂದು ಅರ್ಥ. ಆಕಾಶ ಎಂದರೆ ಶೂನ್ಯವೆಂದೇ ಅರ್ಥ. ಶೂನ್ಯವನ್ನು ದೇವರಿಗೆ ಸಮಾನವಾಗಿ, ಏನು ಅಲ್ಲದಿರುವುದೆಂದು ಉಪಮಾನವಾಗಿ ಹೇಳಬಹುದು. ಶೂನ್ಯ ಇಲ್ಲವೆ ಆಕಾಶ ದೇವರಲ್ಲದಿದ್ದರೂ ದೇವರಿಗೆ ಹತ್ತಿರವಾಗಿ, ದೇವರಿಗೆ ಸಮಾನವಾಗಿ ಹೇಳಬಹುದು. ಯಾವ ಸ್ಥೂಲ ಪದಾರ್ಥವೂ ಅಲ್ಲದಿರುವಂತಹ ದೇವರನ್ನು, ಯಾವ ಸ್ಥೂಲ ವಸ್ತುವಾಗಲಿ ಶೂನ್ಯಕ್ಕೆ ಹೋಲಿಸಿ ಹೇಳುವುದಕ್ಕೆ ಅವಕಾಶ ಇದೆ. ಇಂದಿಗೂ ಬಹಳಜನ ದೈವವನ್ನು ಜ್ಞಾಪಕ ಮಾಡಿಕೊಂಡಾಗ ಆಕಾಶದಕಡೆ ನೋಡಿ ನಮಸ್ಕರಿಸುತ್ತಿರುತ್ತಾರೆ. ಕ್ರಿಕೆಟ್ ಆಟಗಾರರು ನೂರು ರನ್ನುಗಳನ್ನು ಮಾಡಿದಾಗ ದೇವರಿಗೆ ಕೃತಜ್ಞತೆ ಹೇಳಿಕೊಂಡಂತೆ ಆಕಾಶದಕಡೆ ನೋಡುವುದು ಗಮನಿಸಬಹುದು. ಅದೇ ವಿಧವಾಗಿ ಕೆಲವರು ತಮ್ಮ ಮಾತುಗಳಲ್ಲಿ ದೇವರು ಮೇಲಿಂದ ನೋಡುತ್ತಿದ್ದಾನೆಂದು ಸಹ ಅನ್ನುತ್ತಿರುತ್ತಾರೆ. ಹೀಗೆ ಅನೇಕಜನ ತಮ್ಮ ಭಾವನೆಯಲ್ಲಿ ದೇವರು ಆಕಾಶದಲ್ಲಿ ತುಂಬಿದ್ದಾನೆಂದು ತಿಳಿಯುತ್ತಿರುತ್ತಾರೆ. ದೇವರು ಕಾಣಿಸದಂತೆ ಅಣುಅಣುವಿನಲ್ಲಿ ಆಕಾಶವೆಲ್ಲಾ ತುಂಬಿರುವುದು ನಿಜವೇ. ಆದ್ದರಿಂದ **ಗಗನಮ್ ಶೂನ್ಯಮ್ ಎನ್ನುವಂತೆ ಶೂನ್ಯಮ್ ದೈವಮ್** ಎಂದು ಸಹ ಎನ್ನಬಹುದು. ಅಷ್ಟೇ ಅಲ್ಲದೆ ದೇವರು ಮೇಲಿಂದ ನೋಡುತ್ತಿದ್ದಾನೆಂದು ಬಹಳಜನ ಎನ್ನುತ್ತಿರುತ್ತಾರೆ. ಈ ಮಾತುಗಳೆಲ್ಲವನ್ನನುಸರಿಸಿ ದೇವರು ಮೇಲಿರುವ ಆಕಾಶದಲ್ಲಿ ಸಹ ಇದ್ದಾನೆಂದು ಹೇಳಬಹುದು. ದೇವರು ಗಾಳಿಯಲ್ಲಿಯೂ, ಅಗ್ನಿಯಲ್ಲಿಯೂ, ನೀರಿನಲ್ಲಿಯೂ, ಭೂಮಿಯಲ್ಲಿಯೂ ಅಣುಅಣುವಿನಲ್ಲಿಯೂ ತುಂಬಿದ್ದರೂ, ಅವುಗಳಿಗೆ ಪ್ರಾಧಾನ್ಯತೆಕೊಡದಂತೆ ಒಂದು ಆಕಾಶಕ್ಕೆ ಏಕಷ್ಟು ಪ್ರಾಧಾನ್ಯತೆ ಕೊಟ್ಟಿದ್ದಾರೆಂದು ಯೋಚಿಸಿದರೆ ಸ್ವಲ್ಪ ವಿವರ ತಿಳಿಯುತ್ತದೆ. ಆ ವಿವರವೇನೆಂದರೆ!

ಗಾಳಿ, ಅಗ್ನಿ, ನೀರು, ಭೂಮಿಗಳಲ್ಲಿ ಸ್ವಯಂ ಪ್ರಕಾಶವಾದವು ಯಾವುದು ಇಲ್ಲ. ಎಲ್ಲಿಯಾದರು ಭೂಮಿಯಲ್ಲಿ ರತ್ನದಂತಹವು ಚಿಕ್ಕವು ಪ್ರಕಾಶವಾದವು ಇದ್ದರೂ ಅವು ಸಜೀವವಾಗಿ ಇರುವುದಿಲ್ಲ. ಒಂದೇವೊಂದು ಆಕಾಶದಲ್ಲಿ ಮಾತ್ರವೆ ಸಜೀವವಾಗಿ ಇದ್ದು, ಪ್ರಕಾಶವಿರುವವಾಗಿದ್ದು, ಏನನ್ನಾದರೂ ಗ್ರಹಿಸುವ ಶಕ್ತಿ ಇರುವ ಗ್ರಹಗಳಾಗಿ ಇರುವವು ಮೂರೇ ಮೂರು ಇವೆ. ಅವುಗಳೇ ಒಂದು ಸೂರ್ಯನು, ಎರಡು ಚಂದ್ರನು, ಮೂರು ನಕ್ಷತ್ರ. ಆಕಾಶದಲ್ಲಿರುವ ಸೂರ್ಯ, ಚಂದ್ರ, ನಕ್ಷತ್ರಗಳು ಮೂರು ಪೂರ್ವಕಾಲದಿಂದ ಮನುಷ್ಯರಿಂದ ದೈವಸಮಾನವಾಗಿ ಪರಿಗಣಿಸಲ್ಪಡುತ್ತಿವೆ. ಭೂಮಿ ಮೇಲೆ ನಿವಾಸಿಸುವ ಪ್ರಜೆಗಳು ನಾಗರಿಕತೆ ಇಲ್ಲದ ಕಾಲದಿಂದ ಸೂರ್ಯನನ್ನು ಕೆಲವರೂ, ಚಂದ್ರನನ್ನು ಕೆಲವರೂ, ನಕ್ಷತ್ರವನ್ನು ಕೆಲವರೂ ಆರಾಧಿಸುತ್ತಲೇ ಇದ್ದಾರೆ. ಮನುಷ್ಯರು ಸೃಷ್ಟಿಸಿಕೊಂಡ ವಿಗ್ರಹಾರಾಧನೆ ಇಲ್ಲದ ಕಾಲದಲ್ಲಿ ಸಹ ಗ್ರಹಗಳಾದ ಸೂರ್ಯ, ಚಂದ್ರ, ನಕ್ಷತ್ರಗಳನ್ನು ಆರಾಧಿಸುತ್ತಿದ್ದರು. ಕೆಲವು ದೇಶಗಳಲ್ಲಿ ಸೂರ್ಯನನ್ನು ಹೆಚ್ಚಾಗಿ ಆರಾಧಿಸುತ್ತಿದ್ದರು, ಮತ್ತೆ ಕೆಲವು ದೇಶಗಳಲ್ಲಿ ಚಂದ್ರನನ್ನು ಹೆಚ್ಚಾಗಿ ಆರಾಧಿಸುತ್ತಿದ್ದರು. ಕೆಲವು ದೇಶಗಳು ಪ್ರತ್ಯೇಕಿಸಿ ನಕ್ಷತ್ರವನ್ನೇ ಹೆಚ್ಚಾಗಿ ಆರಾಧಿಸುತ್ತಿದ್ದರು. ಇನ್ನೂ ಕೆಲವು ದೇಶಗಳಲ್ಲಿ ಚಂದ್ರನನ್ನು ನಕ್ಷತ್ರವನ್ನು ಆರಾಧಿಸಿದರೆ, ಇನ್ನೂ ಕೆಲವು ದೇಶಗಳಲ್ಲಿ ಸೂರ್ಯಚಂದ್ರರನ್ನೂ, ಮತ್ತೆಕೆಲವು ದೇಶಗಳಲ್ಲಿ ಮೂರು ಗ್ರಹಗಳನ್ನು ಆರಾಧಿಸುತ್ತಿದ್ದರು. ಈಗಲೂ ಆಯಾದೇಶಗಳಲ್ಲಿ ಅವರ ದೇಶ ಬಾವುಟಗಳ ಮೇಲೆ ಅವರು ಆರಾಧಿಸುವ ಗ್ರಹಗಳ ಬೊಂಬೆಗಳನ್ನು ಗುರುತಿಗಾಗಿ ಇಟ್ಟುಕೊಂಡು ಗೌರವದಿಂದ ನೋಡಿಕೊಳ್ಳುತ್ತಿದ್ದಾರೆ. ಈಗಲೂ ಅಮೆರಿಕಾ ಬಾವುಟಗಳಲ್ಲಿ ನಕ್ಷತ್ರಗಳನ್ನೂ, ಪಾಕಿಸ್ಥಾನ್ ಬಾವುಟದಲ್ಲಿ ಚಂದ್ರನನ್ನು, ನಕ್ಷತ್ರವನ್ನೂ ಎಲ್ಲರೂ ಗಮನಿಸಿಯೇ ಇರುತ್ತಾರೆ. ಲೆಕ್ಕಿಸಿ ನೋಡಿದರೆ 73 ದೇಶಗಳು ತಮ್ಮ ಬಾವುಟಗಳ ಮೇಲೆ ಸೂರ್ಯನನ್ನೊ, ಚಂದ್ರನನ್ನೊ, ನಕ್ಷತ್ರಗಳನ್ನೊ ಮುದ್ರಿಸಿಕೊಂಡಿವೆ. ಅರ್ಜೆಂಟೀನಾ ಮೊದಲಾದ 13 ದೇಶಗಳು ಸೂರ್ಯನ ಬಾವುಟವನ್ನು ಇಟ್ಟುಕೊಂಡರೆ, ಮಾಲ್ದೀವರು ಚಂದ್ರನ ಬಾವುಟವನ್ನು ಇಟ್ಟುಕೊಂಡರೆ, ಕ್ಯೂಬಾ, ಚೈನಾ, ಅಮೆರಿಕಾ ಮೊದಲಾದ 59 ದೇಶಗಳು ನಕ್ಷತ್ರವನ್ನು ಬಾವುಟಗಳಲ್ಲಿ ಇಟ್ಟುಕೊಂಡಿವೆ.



Argentina
**ಸೂರ್ಯನು-ಅರ್ಜೆಂಟೀನಾ**



Maldives
**ಚಂದ್ರನು-ಮಾಲ್ದಿವು**



Burkina
**ನಕ್ಷತ್ರ-ಬರ್‌ಕಿನ**

ಪೂರ್ವದಿಂದ ದೈವಜ್ಞಾನದಲ್ಲಿ ಹಿಂದುಳಿದಿರುವ 73 ದೇಶಗಳು ಆಕಾಶದಲ್ಲಿನ ಮೂರು ಗ್ರಹಗಳನ್ನು ಉನ್ನತವಾಗಿ ದೈವಸಮಾನವಾಗಿ ಭಾವಿಸಿ ದೇಶಬಾವುಟಗಳ ಮೇಲೆ ಗೌರವವಾಗಿ ಇಟ್ಟುಕೊಂಡರೆ, ಪೂರ್ವದಿಂದ ಆತ್ಮಜ್ಞಾನದಲ್ಲಿ ಅತಿ ಉನ್ನತಸ್ಥಾನದಲ್ಲಿದ್ದು, ಜ್ಞಾನಕ್ಕೆ ಗುರುತಾಗಿ ಇಂದೂಗಳೆಂದು, ಜ್ಞಾನನಿಲಯವಾದ ಭಾರತದೇಶವು ಇಂದೂದೇಶವೆಂದು ಹೆಸರುವಾಸಿಯಾಗಿರುವಾಗ, ಈದಿನ ಜ್ಞಾನವನ್ನು ಕಳೆದುಕೊಂಡ ನಾವು ನಮ್ಮ ದೇಶಬಾವುಟಗಳ ಮೇಲೆ ಸೂರ್ಯ, ಚಂದ್ರ, ನಕ್ಷತ್ರಗಳಲ್ಲಿ ಯಾವುದೊಂದನ್ನು ಸಹಾ ಇಟ್ಟುಕೊಳ್ಳದೆ ಮೂರು ಬಣ್ಣಗಳನ್ನೂ, ಒಂದು ಗಾಡಿಚಕ್ರವನ್ನು ಇಟ್ಟುಕೊಂಡಿದ್ದೇವೆ. ಬಾವುಟಗಳ ವಿಷಯ ಪಕ್ಕಕ್ಕಿಟ್ಟರೆ ಈಗಲೂ ಭಾರತದೇಶದಲ್ಲಿ ಸೂರ್ಯಚಂದ್ರಾದಿಗಳನ್ನು ಕೆಲವರು ಆರಾಧಿಸುತ್ತಲೆ ಇದ್ದಾರೆಂದು ಒಪ್ಪಿಕೊಳ್ಳದೆ ತಪ್ಪುವುದಿಲ್ಲ. ಸೂರ್ಯ ನಮಸ್ಕಾರಗಳೆಂಬ ಹೆಸರಿನಿಂದ ಸೂರ್ಯನನ್ನು, ಪೌರ್ಣಮಿ ಪೂಜೆಗಳೆಂಬ ಹೆಸರಿನಿಂದ ಚಂದ್ರನನ್ನು, ಅಮಾವಾಸ್ಯೆ ಪೂಜೆಗಳೆಂದು ನಕ್ಷತ್ರಗಳನ್ನು ಆರಾಧಿಸುವುದು ನಡೆಯುತ್ತಿದೆ. ಈ ವಿಧವಾಗಿ ಪ್ರಪಂಚ ನಾಲ್ಕುಮೂಲೆಗಳಲ್ಲಿಯೂ ನಾಗರಿಕತೆ ಇರುವವರೂ, ನಾಗರಿಕತೆ ಇಲ್ಲದವರೂ, ತಿಳಿದೊ ತಿಳಿಯದೆಯೊ ಸೂರ್ಯ ಚಂದ್ರ ನಕ್ಷತ್ರ ಗಳನ್ನು ಆರಾಧಿಸುತ್ತಲೇ ಇದ್ದಾರೆ. ಇಂದೂ ದೇಶವಾದ ಭಾರತದೇಶದಲ್ಲಿ ಈಗಲೂ ಕೆಲವು ಕಡೆ ಸೂರ್ಯದೇವಾಲಯಗಳು ಇವೆ. ಸೂರ್ಯ ನಮಸ್ಕಾರಗಳೆಂದು ಪ್ರಾತಃ ಕಾಲದಲ್ಲಿ ಯಾರೋ ಒಬ್ಬರು ಸೂರ್ಯನಿಗೆ ಮುಗಿಯುವುದು ಸಹ ಇದೆ.

ಈ ವಿಧವಾಗಿ ನೋಡುತ್ತಾಹೋದರೆ ಭೂಮಿ ಮೇಲೆ ಪೂರ್ವದಿಂದ ಆಕಾಶದಲ್ಲಿನ ಮೂರು ಗ್ರಹಗಳಿಗು ದೈವಸಂಬಂಧವಾಗಿ ಎಷ್ಟೋ ಬೆಲೆಯಿದೆ.

ದೊಡ್ಡ ಬೆಲೆಯುಳ್ಳ ಸೂರ್ಯ, ಚಂದ್ರ, ನಕ್ಷತ್ರ ಗ್ರಹಗಳನ್ನು ವಿಶಧೀಕರಿಸಿಕೊಂಡು ನೋಡಿದರೆ ಸೂರ್ಯನು ಹೆಚ್ಚು ತೇಜಸ್ಸುಹೊಂದಿ ಹೆಚ್ಚಾಗಿ ಕಾಂತಿಯನ್ನು ಕೊಡುತ್ತಾ ಮೊದಲ ಸ್ಥಾನದಲ್ಲಿದ್ದಾನೆ. ಹಾಗೆಯೇ ಎರಡನೆಯ ಸ್ಥಾನದಲ್ಲಿ ಚಂದ್ರನು ಸೂರ್ಯನಿಗಿಂತ ಕಡಿಮೆ ತೇಜಸ್ಸು ಹೊಂದಿ ಕಡಿಮೆ ಕಾಂತಿಯನ್ನು ಕೊಡುತ್ತಿದ್ದಾನೆ. ಮೂರನೆಯ ಸ್ಥಾನದಲ್ಲಿ ನಕ್ಷತ್ರ ಚಂದ್ರನಿಗಿಂತ ಕಡಿಮೆ ಕಾಂತಿಯನ್ನು ಕೊಡುವುದು ಕಡಿಮೆ ಪ್ರಕಾಶ ಹೊಂದಿರುವುದನ್ನು ಗ್ರಹಿಸಬಹುದು. ಕಾಂತಿಕೊಡುವುದರಲ್ಲಿಯು, ಪ್ರಕಾಶವಾಗಿ ಕಾಣಿಸುವುದರಲ್ಲಿಯು ಮೊದಲ ಸೂರ್ಯನು ಒಂದನೆಯ ಸ್ಥಾನದಲ್ಲಿರುವಾಗ, ಚಂದ್ರನು ಎರಡನೆಯ ಸ್ಥಾನದಲ್ಲಿದ್ದಾನೆ. ಹಾಗೆಯೇ ನಕ್ಷತ್ರ ಮೂರನೆಯ ಸ್ಥಾನದಲ್ಲಿದೆ. ದೂರದಲ್ಲಿ ಯಾರು ದೂರವಾಗಿ ಇದ್ದಾರೆಂದು ನೋಡಿದರೆ ಕಾಂತಿಯಲ್ಲಿ ಎರಡನೆಯ ಸ್ಥಾನದಲ್ಲಿರುವ ಚಂದ್ರನು ನಮಗೆ 3,84,401 ಕಿಲೋಮೀಟರ್‌ಗಳ ದೂರದಲ್ಲಿರು ವಾಗ, ಸೂರ್ಯನು ಸುಮಾರು 14,96,00,000 ಕಿಲೋಮೀಟರ್ ಗಳ ದೂರದಲ್ಲಿರುವಾಗ ನಕ್ಷತ್ರಗಳು ಕೆಲವು ಲಕ್ಷಗಳ ಕೋಟಿಗಳ ಕಿಲೋಮೀಟರ್ ಗಳ ದೂರದಲ್ಲಿವೆ. ಇದರ ಪ್ರಕಾರ ಗಮನಿಸಿದರೆ ಚಂದ್ರನು ಸೂರ್ಯನಿಗಿಂತ ಹತ್ತಿರವಾಗಿದ್ದಾನೆಂದು, ಚಂದ್ರನು ಹತ್ತಿರದವನು ಸೂರ್ಯನು ದೂರದವನು, ನಕ್ಷತ್ರ ಇನ್ನೂ ದೂರವಾಗಿದೆಯೆಂದು ತಿಳಿಯುತ್ತಿದೆ. ಮೂರುಗ್ರಹಗಳನ್ನು ಬಿಡಿಬಿಡಿಯಾಗಿ ಕಾಂತಿಯಲ್ಲಿಯೂ, ದೂರದಲ್ಲಿಯು ಗಮನಿಸಿದ್ದೇವೆ. ಹಾಗೆಯೇ ಇನ್ನೊಂದು ವಿಧವಾಗಿ ಕಾಲದಲ್ಲಿ ನೋಡಿದರೆ ಸೂರ್ಯನು ಹಗಲು, ಚಂದ್ರನು ರಾತ್ರಿ, ನಕ್ಷತ್ರ ಯಾವಾಗಲೂ ಕಾಣಿಸುತ್ತಾರೆ. ಆದ್ದರಿಂದ ಹಗಲಿಗೆ ರಾಜನು ಸೂರ್ಯನೆಂದು, ರಾತ್ರಿಗೆ ರಾಜ ಚಂದ್ರನೆಂದು, ಎಲ್ಲಾವೇಳೆಯಲ್ಲಿ ರಾಜನು ನಕ್ಷತ್ರವೆಂದು ಪೂರ್ವದಿಂದ ನಮ್ಮ ಹಿರಿಯರು ಹೇಳುತ್ತಿದ್ದಾರೆ. ಇಲ್ಲಿಗೆ ಬಹಳಜನ ಬರೆದ ಬರಹಗಳಲ್ಲಿ ರೇರಾಜ ಚಂದ್ರನೆಂದು, ದಿನಕರನು ಸೂರ್ಯನೆಂದು ಕಾಣಿಸುತ್ತಲೆ ಇರುತ್ತದೆ.

ಆಕಾಶದಲ್ಲಿನ ಮೂರು ಗ್ರಹಗಳು ಕಾಂತಿಯಲ್ಲಿಯೂ, ದೂರದಲ್ಲಿಯೂ, ಅಧಿಕಾರದಲ್ಲಿಯೂ ಮೂರುವಿಧಗಳಾಗಿಯೇ ಇದ್ದಾರೆ. **"ಗಗನಮ್, ಶೂನ್ಯಮ್, ಶೂನ್ಯಮ್ ದೈವಮ್, ದೈವಮ್ ತ್ರೈತಮ್"** ಎಂದು ಈಗ ನಾವು ಹೇಳಿ ಕೊಳ್ಳುತ್ತಿದ್ದೇವೆ. ಕೊನೆಗೆ ಇದರ ಸಾರಾಂಶ ಏನೆಂದರೆ ದೇವರು ಮೂರು ವಿಧಗಳಾಗಿ ಇದ್ದಾನೆಂದು ಅರ್ಥ. ಆಧ್ಯಾತ್ಮಿಕದಲ್ಲಿ ಮುಖ್ಯಸೂತ್ರ ಸಹಾ ಇದೇನೆ. ಕಾಣಿಸದ ದೈವವು (ದೇವರು) ಕಾಣಿಸದ ಮೂರು ಭಾಗಗಳಾಗಿ ಇದ್ದಾನೆ. ಆ ಮೂರು ಭಾಗಗಳನ್ನೇ ಭಗವದ್ಗೀತೆಯಲ್ಲಿ ಕ್ಷರನು, ಅಕ್ಷರನು, ಪುರುಷೋತ್ತಮ ನೆಂದು ಅಂದಿದ್ದಾರೆ. ಅದೇ ಅರ್ಥವಾಗುವಂತೆ ಹೇಳಿಕೊಂಡರೆ ನಾಶವಾಗುವ ವನು, ನಾಶವಾಗದಿರುವವನು ಮತ್ತು ಮೊದಲ ಇಬ್ಬರ ಪುರುಷರಿಗಿಂತ ಅತೀತನು ಉತ್ತಮವಾದವನೆಂದು ಅರ್ಥ. ಈ ಮೂವರನ್ನೇ ಇನ್ನೂ ಚೆನ್ನಾಗಿ ಅರ್ಥವಾಗು ವಂತೆ ಹೇಳಿಕೊಂಡರೆ ಜೀವಾತ್ಮ, ಆತ್ಮ, ಪರಮಾತ್ಮ ಎಂದು ಹೇಳಬಹುದು. ಈ ತ್ರೈತವಾದ ದೇವರು ಕಣ್ಣಿಗೆ ಕಾಣಿಸುವವನು ಅಲ್ಲ. ಆದ್ದರಿಂದ ದೇವರನ್ನು ತಿಳಿಸುವುದಕ್ಕೋಸ್ಕರ ಕಣ್ಣಿಗೆ ಕಾಣಿಸುವ ಸೂರ್ಯ, ಚಂದ್ರ, ನಕ್ಷತ್ರಗಳು ಮೂರನ್ನು ಶೂನ್ಯದಲ್ಲಿ ದೇವರೇ ಪ್ರತಿಷ್ಠಿಸಿದ್ದಾನೆ. ಆದ್ದರಿಂದ ಸೂರ್ಯ, ಚಂದ್ರ, ನಕ್ಷತ್ರಗಳನ್ನು ಪ್ರತ್ಯಕ್ಷ ದೈವಗಳೆಂದು ನಮ್ಮ ಹಿರಿಯರು ಬಹಳ ಸಂದರ್ಭಗಳಲ್ಲಿ ಹೇಳಿದ್ದಾರೆ.

ಕಾಣಿಸದ ದೇವರನ್ನು ತಿಳಿಯುವುದಕ್ಕೆ ಕಾಣಿಸುವ ಸೂರ್ಯಚಂದ್ರ, ನಕ್ಷತ್ರಗಳನ್ನು ಇಟ್ಟಿದ್ದಾನೆಂದು ಹೇಳುವುದಕ್ಕೆ ಬಲವಾದ ಆಧಾರವೂ ಸಹಾ ಇದೆ. ಅದೇನೆಂದರೆ! ದೈವವು ಭಗವದ್ಗೀತೆಯಲ್ಲಿ ವಿಶ್ವರೂಪಸಂದರ್ಶನ ಯೋಗವೆಂಬ ಅಧ್ಯಾಯದಲ್ಲಿ **"ನಾನೇ ಕಾಲವು"** ಅಂದಿದ್ದಾನೆ. ಆ ಕಾಲವನ್ನು ಅಳೆಯುವುದಕ್ಕೆ ಸೂರ್ಯ, ಚಂದ್ರ, ನಕ್ಷತ್ರಗಳು ಹೊರತುಪಡಿಸಿ ಏನು ಆಧಾರವಿಲ್ಲ. ಆದ್ದರಿಂದ ಯಾವ ಕಡೆ ನೋಡಿದರೂ ದೈವಕ್ಕು, ಮೂರು ಗೋಳಗಳಿಗು ಎಷ್ಟೋ ಸಂಬಂಧವಿದೆಯೆಂದೆ ಹೇಳಬಹುದು. ಇಲ್ಲಿಯವರೆಗು ನಾವು ಹೇಳಿಕೊಂಡಿರುವುದು ಅಭೌತಿಕವಾದ ದೇವರನ್ನು ತಿಳಿಯುವುದಕ್ಕೆ ಭೌತಿಕವಾದ ಸೂರ್ಯ, ಚಂದ್ರ, ನಕ್ಷತ್ರಾಧಿಗಳು ಆಧಾರವೆಂದು, ಭೌತಿಕಪದ್ಧತಿಯಾಗಿ ಕಾಣಿಸುವ

ಸೂರ್ಯ, ಚಂದ್ರ ನಕ್ಷತ್ರ ಗೋಳಗಳನ್ನು ಕುರಿತು ಹೇಳಿಕೊಂಡಿದ್ದೇವೆ. ಇನ್ನು ಆಧ್ಯಾತ್ಮಿಕ ಪದ್ಧತಿಯಾಗಿ ವಿವರಿಸಿಕೊಂಡು ನೋಡೋಣ. ಇಲ್ಲಿಯವರೆಗು ನಾವು ಹೇಳಿಕೊಂಡ ವಿಷಯವೆಲ್ಲಾ ವಿಶ್ವದಲ್ಲಿರುವ ಎಲ್ಲರಿಗೂ ಸಂಬಂಧಿಸಿರುವುದೆಂದು ನೆನಪಲ್ಲಿಟ್ಟುಕೊಳ್ಳಬೇಕು. ವಿಶ್ವವ್ಯಾಪ್ತವಾಗಿ ಎಲ್ಲರಿಗೂ ಸಂಬಂಧಿಸಿದ ವಿಷಯವಾದ್ದರಿಂದ ಇದು ಯಾವೊಂದು ಮತಕ್ಕೆ ಸಂಬಂಧಿಸಿರುವುದು ಅಲ್ಲವೆಂದು ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ದೇವರು ಎಲ್ಲರನ್ನು ಸೃಷ್ಟಿಸಿದ್ದಾನೆ, ದೇವರು ಎಲ್ಲರವನು. ದೇವರನ್ನು ತಿಳಿದುಕೊಳ್ಳುವುದರಲ್ಲಿ ಎಲ್ಲರಿಗೂ ಸಮಾನ ಹಕ್ಕು ಇದೆ. ಆದ್ದರಿಂದ ಈ ವಿಷಯವು ಮತಾತೀತವಾದುದೆಂದು ಗ್ರಹಿಸಬೇಕು.

ಭೂಮಿಮೇಲೆ ಮನುಷ್ಯರನ್ನು ದೇವರು ಒಂದೇ ಪದ್ಧತಿಯಲ್ಲಿ ಶರೀರಗಳನ್ನು ತಯಾರು ಮಾಡಿ ಯಾವ ಮತವನ್ನಾಗಲಿ ಒಂದೇ ಧರ್ಮದ ಪ್ರಕಾರ ಹುಟ್ಟಿಸಿದರೆ, ಮನುಷ್ಯ ಅಧರ್ಮಗಳನ್ನು ಆಚರಿಸುತ್ತಾ, ಅನೇಕ ಮತಗಳನ್ನು ಸೃಷ್ಟಿಸಿಕೊಂಡು, ಮನುಷ್ಯರೆಲ್ಲ ಒಂದೇ ಜಾತಿಯೆಂದು ಮರೆತುಹೋಗಿ, ಮತಹುಚ್ಚಿನಲ್ಲಿ ಬಿದ್ದು ತಮ್ಮ ಜಾತಿಯನ್ನು ತಾವೇ ದ್ವೇಷಿಸುತ್ತಾ ಒಬ್ಬರಮೇಲೆ ಒಬ್ಬರು ದಾಳಿಗಳು ಮಾಡಿಕೊಳ್ಳುತ್ತಿದ್ದಾರೆ. ಅಂತಹ ಮತ ದ್ವೇಷಗಳು, ಮತ ಹಿಂಸೆಗಳು ಹೋಗಬೇಕೆಂದರೆ ದೈವಜ್ಞಾನ ತಿಳಿದಿರಬೇಕು. ದೈವಜ್ಞಾನದ ಪ್ರಕಾರ ಮನುಷ್ಯನಾಗಲಿ, ಪ್ರಾಣಿಯಾಗಲಿ, ಪಕ್ಷಿಯಾಗಲಿ ಎಲ್ಲಾ ಜೀವರಾಶಿಗಳು ಮತಗಳಿಲ್ಲದವಾಗಿ ಸಮಾನವಾಗಿ ಇವೆ. ಅದರ ಪ್ರಕಾರ ಮನುಷ್ಯರೆಲ್ಲರಲ್ಲಿ ದೈವಧರ್ಮ ಸಮಾನ. ಒಬ್ಬ ಮನುಷ್ಯನನ್ನು ತೆಗೆದುಕೊಂಡರೆ ಆತನ ಶರೀರದಲ್ಲಿ ಮೂರು ಆತ್ಮಗಳು ನಿವಾಸಿಸುತ್ತಿವೆ. ಶರೀರ ಬೇರೆ ಆತ್ಮಗಳು ಬೇರೆ. ಶರೀರ ಕಾಣಿಸುತ್ತಿದೆ, ಆತ್ಮಗಳು ಕಾಣಿಸುವುದಿಲ್ಲ. ಮೇಲಕ್ಕೆ ಮನುಷ್ಯ ಯಾವ ಮತದ ಹೆಸರು ಹೇಳಿಕೊಂಡರೂ, ನಮ್ಮ ದೇವರು ಇಂತಹವನು ಎಂದು ಯಾವ ದೇವರ ಹೆಸರನ್ನು ಹೇಳಿಕೊಂಡರೂ, ಶರೀರದೊಳಗಿನ ಆತ್ಮಗಳು ಮಾತ್ರ ಎಲ್ಲರಲ್ಲಿ ಒಂದೇ ಧರ್ಮದ ಪ್ರಕಾರ ನಿರ್ಮಿಸಲ್ಪಟ್ಟಿವೆ. ನಮ್ಮ ಮತದಲ್ಲಿ ಆತ್ಮಗಳನ್ನು ಕುರಿತು ಹೇಳಲಿಲ್ಲವೆಂದರೂ, ನಮ್ಮ ಮತದಲ್ಲಿ ಇರುವವು ಎರಡು ಆತ್ಮಗಳೆ

ಅಂದರೂ, ಇಲ್ಲವೆ ಒಂದೇ ಆತ್ಮವೆಂದರೂ, ನಮಗೆ ಇಷ್ಟವಾದ ಮತ ವಿಧಾನವನ್ನು ಕುರಿತು ಹೇಳಿದರೂ, ದೇವರ ಧರ್ಮಗಳ ಪ್ರಕಾರ ಪ್ರತಿ ಮನುಷ್ಯ ಮೂರು ಆತ್ಮಗಳಿಂದಲೆ ತುಂಬಿದ್ದಾನೆ. ಆ ಮೂರು ಆತ್ಮಗಳನ್ನೇ ಜೀವಾತ್ಮ, ಆತ್ಮ, ಪರಮಾತ್ಮಯೆಂದು ಜ್ಞಾಪಕವಿಟ್ಟುಕೊಳ್ಳಬೇಕು. ಆಧ್ಯಾತ್ಮಿಕರಂಗಕ್ಕೆ ಈ ಮೂರು ಆತ್ಮಗಳೇ ಆಧಾರ. ಯಾರಿಗಾದರೂ ಮೂರು ಆತ್ಮಗಳ ವಿವರ ತಿಳಿಯದವರೆಗೂ ಆಧ್ಯಾತ್ಮಿಕ ತಿಳಿಯದಂತೆ. ಈ ಮೂರನ್ನೇ ತ್ರೈತ ಎನ್ನುತ್ತಿದ್ದೇವೆ. ತ್ರೈತ ಶಾಸ್ತ್ರಬದ್ಧವಾಗಿ, ಸಿದ್ಧಾಂತ ಬದ್ಧವಾಗಿ ಹೇಳಲ್ಪಟ್ಟಿರುವುದಾದ್ದರಿಂದ ಮೂರು ಆತ್ಮಗಳ ಶಾಸ್ತ್ರೀಯತೆಯನ್ನು ತ್ರೈತಸಿದ್ಧಾಂತ ಎನ್ನುತ್ತಿದ್ದೇವೆ. ತ್ರೈತಸಿದ್ಧಾಂತವನ್ನು ತಿಳಿಯುವುದು ಶರೀರ ಧರಿಸಿದ ಪ್ರತಿ ಮನುಷ್ಯನಿಗು, ಶಿರಸ್ಸಿರುವ ಪ್ರತಿ ಮತಸ್ಥನಿಗು ಅಗತ್ಯ.

ದೇವರು ವಿಶ್ವದಲ್ಲಿ ಜೀವರಾಶಿಗಳಲ್ಲಿ ಮೂರು ಆತ್ಮಗಳಾಗಿ ವಿಭಜಿ ಸಲ್ಪಟ್ಟಿದ್ದಾನೆ. ವಿಶ್ವದಲ್ಲಿ ಮೂರು ಆತ್ಮಗಳಾಗಿರುವ ದೈವವು ಆಕಾಶದಲ್ಲಿ ಮೂರು ಗೋಳಗಳಾಗಿ ಕಾಣಿಸುತ್ತಿದ್ದಾನೆ. **ದೇವರು ತನ್ನ ಇರುವಿಕೆಯನ್ನು ತಿಳಿಸಲು ಆಕಾಶದಲ್ಲಿ ಸೂರ್ಯ, ಚಂದ್ರ, ನಕ್ಷತ್ರಗಳಾಗಿ ಕಾಣಿಸಬೇಕಾಗಿ ಬಂದಿದೆ. ಇದರಲ್ಲಿ ಸೂರ್ಯನನ್ನು ಜೀವಾತ್ಮವಾಗಿಯೂ, ಚಂದ್ರನನ್ನು ಆತ್ಮವಾಗಿಯೂ, ನಕ್ಷತ್ರವನ್ನು ಪರಮಾತ್ಮವಾಗಿಯೂ ಹೋಲಿಸಿ ಹೇಳಬಹುದು**. ಮತಗಳಿಗೆ ಅತೀತವಾಗಿ ಪ್ರತಿ ಶರೀರದಲ್ಲಿಯೂ ಮೂರು ಆತ್ಮಗಳು ಇವೆ. ಪ್ರಪಂಚದಲ್ಲಿ **ಮೂರು ಆತ್ಮಗಳು ಇಲ್ಲದ ಮನುಷ್ಯನಾಗಲಿ, ಪ್ರಾಣಿಯಾಗಲಿ, ಪಕ್ಷಿಯಾಗಲಿ, ಚಿಕ್ಕ ಕ್ರಿಮಿಯಾಗಲಿ, ಕೀಟಕವಾಗಲಿ ಯಾವುದೂ ಇಲ್ಲ. ಮೂರು ಆತ್ಮಗಳ ವಿಷಯ ನಿಗೂಢವಾದ ರಹಸ್ಯ**. ಆ ರಹಸ್ಯವನ್ನು ತಿಳಿದುಕೊಳ್ಳುವುದಕ್ಕೆ ಆಧಾರವಾಗಿರುವ ಸೂರ್ಯ, ಚಂದ್ರ, ನಕ್ಷತ್ರಗಳಿಗು ಪ್ರತ್ಯೇಕತೆಯನ್ನು ತಿಳಿಸುವುದಕ್ಕೆ, ವಾರದಲ್ಲಿನ ಏಳು ದಿನಗಳಲ್ಲಿ ಮೊದಲ ಮೂರು ದಿನಗಳಿಗೆ ಈ ಮೂರು ಗೋಳಗಳ ಹೆಸರುಗಳನ್ನೇ ಇಟ್ಟಿದ್ದಾರೆ. ವಾರದಲ್ಲಿ ಪ್ರಾರಂಭವಾಗುವ ಮೊದಲ ದಿನಕ್ಕೆ ಸೂರ್ಯನ ಹೆಸರಿರುವಂತೆ ಆದಿತ್ಯವಾರವೆಂದೂ, ಎರಡನೇ ದಿನಕ್ಕೆ ಚಂದ್ರನ ಹೆಸರಿರುವಂತೆ ಸೋಮ

ವಾರವೆಂದೂ, ಹಾಗೆ ಮೂರನೇ ದಿನಕ್ಕೆ ನಕ್ಷತ್ರ ಹೆಸರಿರುವಂತೆ ಮಂಗಳವಾರ ವೆಂದೂ ಹೆಸರುಗಳು ಇಡುವುದು ನಡೆದಿದೆ. ಸೂರ್ಯನನ್ನು ಆದಿತ್ಯನು ಎನ್ನುತ್ತಾರೆ ಆದ್ದರಿಂದ ಆದಿತ್ಯವಾರವೆಂದೂ, ಚಂದ್ರನನ್ನು ಸೋಮನು ಎನ್ನುತ್ತಾರೆ ಆದುದರಿಂದ ಸೋಮವಾರವೆಂದೂ, ನಕ್ಷತ್ರವನ್ನು ಮಂಗಳನು ಎನ್ನುತ್ತಾರೆ ಆದಕಾರಣ ಮಂಗಳವಾರವೆಂದು ಹೇಳಿದ್ದಾರೆ.

ಪ್ರತಿ ಶರೀರದಲ್ಲಿನ ಜೀವಾತ್ಮ ಅಜ್ಞಾನಸಂಬಂಧವಾದುದು, ಆತ್ಮ ಮಾತ್ರ ಜ್ಞಾನ ಸಂಬಂಧವಾದುದು, ಪರಮಾತ್ಮ ಮೋಕ್ಷಸಂಬಂಧವಾದುದು. ಆದ್ದರಿಂದ ಸೂರ್ಯನ ದಿನವಾದ ಆದಿತ್ಯವಾರವನ್ನು ಅಜ್ಞಾನ ಜೀವಾತ್ಮ ಹುಟ್ಟಿದ ದಿನವೆಂದು, ಚಂದ್ರನ ದಿನವಾದ ಸೋಮವಾರ ಆತ್ಮಜ್ಞಾನ ಹುಟ್ಟಿದ ದಿನವೆಂದು, ನಕ್ಷತ್ರದಿನವಾದ ಮಂಗಳವಾರ ಮೋಕ್ಷ ತಿಳಿದ ದಿನವೆಂದು ಹೇಳಬಹುದು. ಇನ್ನೂ ವಿವರವಾಗಿ ಹೇಳಿಕೊಂಡರೆ ದೇವರು ಜೀವಿಗಳಿಗೋಸ್ಕರವೇ ವಿಶ್ವವನ್ನು ಸೃಷ್ಟಿಸಿದ್ದಾನೆ. ಆದ್ದರಿಂದ ಆ ದಿನವನ್ನು ಆದಿ (ಭಾನು) ವಾರ ಎನ್ನುತ್ತಿದ್ದೇವೆ. 'ಆದಿ' ಎಂದರೆ ಮೊದಲನೆಯದು ಎಂದು ಸಹ ಅರ್ಥವಿದೆ. ಜೀವಾತ್ಮ, ಆತ್ಮ, ಪರಮಾತ್ಮಗಳಲ್ಲಿ ಮೊದಲನೆಯವನಾದ ಜೀವಿಯನ್ನು ಸೃಷ್ಟಿಸಿದ ದಿನವಾದ್ದರಿಂದ ಆ ವಿಧವಾಗಿ ಸಹ ಮೊದಲ ದಿನವನ್ನು ಭಾನುವಾರ ಅನ್ನುತ್ತಿದ್ದೇವೆ. ಇದೆಲ್ಲವೂ ಮನುಷ್ಯರೆಲ್ಲರಿಗೂ ಸಂಬಂಧಿಸಿದ ವಿಷಯವೆಂದು ಮೊದಲೆ ಹೇಳಿಕೊಂಡಿದ್ದೇವೆ ಅಲ್ಲವೆ! ಅದರ ಪ್ರಕಾರವೇ ಇಂದಿಗೂ ಸಹ ಮನುಷ್ಯರು ನಿವಾಸಿಸುತ್ತಿರುವ ಎಲ್ಲಿಯಾದರೂ ಪ್ರಪಂಚವ್ಯಾಪ್ತವಾಗಿ ಭಾನುವಾರ, ಸೋಮವಾರ, ಮಂಗಳವಾರ ಮೂರು ಇವೆ. ಈ ಮೂರು ದಿನಗಳ ಹೆಸರುಗಳು ವಿಶ್ವವ್ಯಾಪ್ತವಾಗಿ ಇರುವುದನ್ನನುಸರಿಸಿ ತ್ರೈತವಾದ ಮೂರು ಆತ್ಮಗಳ ವಿಷಯ ಎಲ್ಲಾ ದೇಶದವರಿಗೂ, ಎಲ್ಲಾ ಮತಗಳವರಿಗೂ ತಪ್ಪದೆ ಅತ್ಯವಶ್ಯಕವಾಗಿ ತಿಳಿಯಬೇಕಾದ ಅವಶ್ಯಕತೆ ಇದೆ. ಆದರೆ ಇಲ್ಲಿಯವರೆಗು ಇತ್ತ ಸ್ವದೇಶವಾದ ಭಾರತದೇಶ ದಲ್ಲಿಯೂ, ಅತ್ತ ಪರದೇಶಗಳಾದ 194 ದೇಶಗಳಲ್ಲಿಯೂ ಮೂರು ಆತ್ಮಗಳ ವಿಷಯವಾಗಲಿ, ವಿವರವಾಗಲಿ ಎಷ್ಟುಮಾತ್ರ ತಿಳಿದಿಲ್ಲ. ಇತರ ದೇಶಗಳನ್ನು

ಬಿಟ್ಟು ನಮ್ಮ ಭಾರತದೇಶ ಚರಿತ್ರೆಯನ್ನು ತೆಗೆದುನೋಡಿದರೆ ಪೂರ್ವದಲ್ಲಿ ಎಲ್ಲಾ ದೇಶಗಳಿಗಿಂತ ಭಾರತದೇಶವೇ ಹೆಚ್ಚಾಗಿ ಆತ್ಮಜ್ಞಾನವನ್ನು ತಿಳಿದ ದೇಶವಾಗಿ ಇರುತ್ತಿತ್ತು ಚಂದ್ರನು ಆತ್ಮ ಜ್ಞಾನಕ್ಕೆ ಚಿಹ್ನೆಯಾದ್ದರಿಂದ ವಾರದಲ್ಲಿ ಎರಡನೆಯ ದಿನವಾಗಿ ಇದೆಯೆಂದು ಹೇಳಿಕೊಂಡಿದ್ದೇವೆ. ಎರಡನೆಯ ದಿನವನ್ನು ಸೋಮವಾರವೆಂದು ಅನ್ನುತ್ತಿದ್ದೇವೆ. ಸೋಮವಾರವನ್ನು 'ಇಂದೂ' ವಾರವೆಂದು ಸಹ ಅನ್ನುತ್ತಿದ್ದರು. ಇಂದೂ ಎಂದರೆ ಚಂದ್ರನು ಎಂದು ಅರ್ಥ. ಅದರ ಪ್ರಕಾರವೇ 'ಇಂದೂ' ಎಂದರೆ ಜ್ಞಾನ ಎಂದೂ ಸಹ ಅರ್ಥ. 'ಮತಿ' ಎಂದರೆ ತಿಳುವಳಿಕೆ (ಬುದ್ಧಿ) ಎಂದು ಅರ್ಥ. 'ಇಂದುಮತಿ' ಎಂದರೆ ಜ್ಞಾನವಿರುವ ಬುದ್ಧಿ ಎಂದು ಅರ್ಥ. ಈ ವಿಧಾನದಿಂದಲೆ ಇಂದುಮತಿ ಎಂದು ಹೆಸರು ಸಹ ನಮ್ಮ ದೇಶದಲ್ಲಿ ಬಹಳಜನ ಇಟ್ಟುಕೊಳ್ಳುತ್ತಿದ್ದರು. ಪೂರ್ವದಲ್ಲಿ ಎಲ್ಲಾ ದೇಶಗಳಿಗಿಂತ ಹೆಚ್ಚಾಗಿ ಆತ್ಮಜ್ಞಾನ ಇರುವ ಮನುಷ್ಯರು ನಮ್ಮ ದೇಶದಲ್ಲಿ ಹೆಚ್ಚಾಗಿ ಇರುತ್ತಿದ್ದರು. ಆದ್ದರಿಂದ ಭಾರತದೇಶಕ್ಕೆ ಇಂದೂದೇಶವೆಂದು ಹೆಸರು ಬಂದಿದೆ. ಪೂರ್ವದಲ್ಲಿ ಇಂದೂದೇಶವೆಂದು ಹೆಸರುವಾಸಿಯಾದ ನಮ್ಮ ದೇಶ ಈ ದಿನ ಆತ್ಮಜ್ಞಾನ ಇಲ್ಲದ್ದಾಗಿ ಹಿಂದೂದೇಶವಾಗಿ ಬದಲಾಗಿಹೋಗಿದೆ. 'ಇಂದೂ' ಎನ್ನುವ ಶಬ್ದಕ್ಕೆ ಅರ್ಥವಿದೆ. 'ಹಿಂದೂ' ಅನ್ನುವ ಶಬ್ದಕ್ಕೆ ಅರ್ಥವಿಲ್ಲ. ನಮ್ಮದು ಅರ್ಥವಿಲ್ಲದ ಹಿಂದೂದೇಶವಲ್ಲ, ಅರ್ಥವಿರುವ ಇಂದೂದೇಶವೆಂದು ಬಿಡಿಸಿ ಹೇಳಿದರೂ ಅರ್ಥಮಾಡಿಕೊಳ್ಳದ ಅಜ್ಞಾನಿಗಳು ಸತ್ಯವನ್ನು ಹೇಳುವವರ ಮೇಲೆ ದಾಳಿಗೆ ಇಳಿಯುತ್ತಿದ್ದಾರೆ. ಅನಂತಪುರಂ ಜಿಲ್ಲೆಯಲ್ಲಿನ ಗುಂತಕಲ್ಲು ಮಂಡಲದಲ್ಲಿ ಮತಭಕ್ತಿ ಹೊರತು, ದೈವಭಕ್ತಿ ಇಲ್ಲದ ಹಿಂದೂಮತನಾಯಕರೆಂದು ಹೇಳಿಕೊಳ್ಳುವವರು ಅಂತಹ ಕೆಲಸಕ್ಕೆ ಸಿದ್ಧವಾಗಿದ್ದಾರೆಂದರೆ ಆಶ್ಚರ್ಯವಲ್ಲವೆ!

ಇಂದೂದೇಶ ಹಿಂದೂದೇಶವಾಗಿ ಬದಲಾಗಿ ಹೋಗಿದ್ದರೂ, ಅಂದಿಗೂ ಇಂದಿಗೂ ಎಂದಿಗೂ ಭಾರತದೇಶ ಇಂದೂದೇಶವೇ. ಏಕೆಂದರೆ ಈ ದಿನ ಸಹ ಮೂರು ಆತ್ಮಗಳ ತ್ರೈತ ಜ್ಞಾನವನ್ನು ಕುರಿತು, ಮೂರು ದಿನಗಳಾದ ಆದಿ, ಸೋಮ, ಮಂಗಳವಾರಗಳ ವಿಶಿಷ್ಟತೆಯನ್ನು ಕುರಿತು ತಿಳಿಸುವುದು

ಭಾರತದೇಶದಲ್ಲಿರುವವರೆ. ಈಗಲೂ ಇಂದೂದೇಶವಾದ ಭಾರತದೇಶದಿಂದಲೇ ಹೊರಗಿನ ದೇಶಗಳಿಗೆ ಆತ್ಮಜ್ಞಾನವೆಂದರೆ ಏನೊ ತಿಳಿಯುತ್ತಿದೆ. ಈಗಲೂ ಸಹ ಇಂದೂಜ್ಞಾನವೇ ವಿಶ್ವವ್ಯಾಪ್ತವಾಗಿದೆ ಎನ್ನುವುದಕ್ಕೆ ದೊಡ್ಡ ಆಧಾರ ಇದೆ. ಆ ಆಧಾರವೇನೆಂದರೆ! ಆದಿ, ಸೋಮ, ಮಂಗಳವಾರಗಳು ಮೂರು ಎಲ್ಲಾ ದೇಶಗಳಲ್ಲಿಯೂ ಇವೆ. ಅಷ್ಟೇ ಅಲ್ಲದೆ ವಾರಕ್ಕೆ ಏಳು ದಿನಗಳು, ತಿಂಗಳಿಗೆ 30 ದಿನಗಳು ಇಂದೂಸಂಪ್ರದಾಯದ ಪ್ರಕಾರ ಇವೆ. ಎಲ್ಲದಕ್ಕಿಂತ ಮುಖ್ಯವಾಗಿ ಅಮೆರಿಕಾದಲ್ಲಾಗಲಿ, ಆಂಧ್ರಾದಲ್ಲಾಗಲಿ ಮೊದಲ ದಿನವಾದ ಸೂರ್ಯನ ದಿನವನ್ನು ಸೂರ್ಯನ ಹೆಸರಿನಿಂದಲೆ ಸನ್ (SUN) ಎಂದೂ, ಎರಡನೆದಿನವಾದ ಚಂದ್ರನ ದಿನವನ್ನು ಚಂದ್ರನ ಹೆಸರಿನಿಂದಲೆ ಮೂನ್ (MOON) ಎಂದೂ ಹೇಳಿಕೊಳ್ಳುತ್ತಿದ್ದಾರೆ. ಮೊದಲನೆಯ ದಿನವಾದ ಸೂರ್ಯನ ದಿನವನ್ನು ಇಂಗ್ಲೀಷ್‌ನಲ್ಲಿ ಸನ್‌ಡೇ ಎಂದೂ, ಎರಡನೆಯ ದಿನವಾದ ಚಂದ್ರನ ದಿನವನ್ನು ಮೂನ್‌ಡೇ ಎಂದೂ ಎಲ್ಲಾ ವಿದೇಶಿಕ್ಯಾಲೆಂಡರ್‌ಗಳಲ್ಲಿಯೂ ಇವೆ. ಚಿಕ್ಕ ತಪ್ಪು ಏನೆಂದರೆ ಆದಿವಾರವನ್ನು ಸನ್‌ಡೇ (SUN DAY) ಎಂದು ಬರೆದವರು ಎರಡನೆದಿನವನ್ನು ಮನ್‌ಡೇ (MON DAY) ಎಂದು ಬರೆದಿದ್ದಾರೆ. ಇದನ್ನು ಗಮನಿಸಿದರೆ ಮನ್‌ಡೇ ಇರಬೇಕಾದ ಕಡೆ ವಾಸ್ತವವಾಗಿ ಮೂನ್‌ಡೇ ಇರಬೇಕು. ಕಾಲಕ್ರಮವಾಗಿ (MOON DAY) ಎಂದು ಇರಬೇಕಾದ ಕಡೆ ಎರಡು ಸೊನ್ನೆಗಳಲ್ಲಿ ಒಂದು ಸೊನ್ನೆ ಎಗರಿಹೋಗಿ ಒಂದು ಸೊನ್ನೆ ಉಳಿದಿರುವುದರಿಂದ (MON DAY) ಮಂಡೆ ಆಗಿದೆ. ಇದು ಕೇವಲ ಕಾಲಕ್ರಮದಲ್ಲಿ ನಡೆದ ತಪ್ಪಾಗಿ ಗಮನಿಸಬೇಕು. ತೆಲುಗು ಭಾಷೆಯಲ್ಲಿ ಮಾತ್ರ ಮೊದಲ ಮೂರು ದಿನಗಳ ಹೆಸರುಗಳು ಇಂದಿಗೂ ಕೆಟ್ಟುಹೋಗದಂತೆ ಹಾಗೆಯೇ ಇವೆ.

ಚಂದ್ರನು ಭೂಮಿಗೆ ಹತ್ತಿರವಾಗಿ ಇದ್ದರೂ, ಸೂರ್ಯನು ಚಂದ್ರನಿಗಿಂತ ದೂರವಾಗಿ ಇದ್ದರೂ ವಾರದಲ್ಲಿನ ಏಳುದಿನಗಳಲ್ಲಿ ಮೊದಲ ಸೂರ್ಯನ ದಿನವಾದ ಭಾನುವಾರ (SUNDAY) ವನ್ನು ಇಟ್ಟು, ಎರಡನೆಯ ದಿನವಾಗಿ ಚಂದ್ರನದಿನವಾದ ಸೋಮವಾರ (MONDAY) ವನ್ನು ಇಡುವುದೇನೆಂದು?

ಮತ್ತು ದೂರವನ್ನು ಆಧಾರ ಮಾಡಿಕೊಂಡು ಮೊದಲು ಸೋಮವಾರವನ್ನಿಟ್ಟು ನಂತರ ಭಾನುವಾರವನ್ನಿಡುವುದು ಸಮಂಜಸ ಅಲ್ಲವೆ! ಎಂದು ಕೆಲವರು ಕೇಳಬಹುದು. ಅದಕ್ಕೆ ಸಮಾಧಾನ ಏನೆಂದರೆ! ಇದಕ್ಕು ಮೊದಲ ಪೇಜಿಗಳಲ್ಲಿ ಕಾಂತಿಯನ್ನನುಸರಿಸಿ ಸೂರ್ಯನು ಮೊದಲನೆಯವನೆಂದು, ಚಂದ್ರನನ್ನು ಎರಡನೆಯವನೆಂದು, ನಕ್ಷತ್ರ ಮೂರನೆಯದೆಂದು, ಅದನ್ನನುಸರಿಸಿ ಅವರಿಗೆ ಸಮಾನ ಹೋಲಿಕೆಗಳಲ್ಲಿ ಸೂರ್ಯನಿಗೆ ಜೀವಿಯನ್ನು, ಚಂದ್ರನಿಗೆ ಆತ್ಮವನ್ನು, ನಕ್ಷತ್ರಕ್ಕೆ ಪರಮಾತ್ಮನನ್ನು ಹೋಲಿಸಿಕೊಂಡಿದ್ದೇವೆ. ದೂರವನ್ನನುಸರಿಸಿ ನೋಡಿದರೆ ಚಂದ್ರನು ಹತ್ತಿರದವನೇ ಆದರೂ ವಾರದಲ್ಲಿ ಸೂರ್ಯನನ್ನೇ ಮೊದಲು ಇಟ್ಟು ಆದಿವಾರವನ್ನು ಮೊದಲ ದಿನವಾಗಿ ಇಡುವುದಕ್ಕೆ ಆಧ್ಯಾತ್ಮಿಕ ಕಾರಣ ಇದೆಯೆಂದು ಹೇಳಬಹುದು. ಅದೇನೆಂದರೆ! ಚಂದ್ರನು ಭೂಮಿಗೆ ಹತ್ತಿರವಾಗಿ ಇದ್ದಂತೆ, ಶರೀರದಲ್ಲಿ ಸಹ ಚಂದ್ರಸಮಾನವಾದ ಆತ್ಮ ಶರೀರವೆಲ್ಲ ವ್ಯಾಪಿಸಿ ಹೊರಗಿನ ಚರ್ಮದವರೆಗು, ಕೂದಲವರೆಗು ಇದ್ದು ಹೊರಗಿನ ಮನುಷ್ಯರಿಗೆ ಹತ್ತಿರವಾಗಿ ಇದ್ದರೂ, ಶರೀರ ಬಾಹ್ಯ ಅವಯವಗಳವರೆಗು ವ್ಯಾಪಿಸಿ ಎಲ್ಲವನ್ನು ಕದಲಿಸಿ ಕೆಲಸ ಮಾಡಿಸುತ್ತಾ ಇದ್ದರೂ ಆತ್ಮವನ್ನು ಯಾರೂ ಹತ್ತಿರವಾಗಿ ಗುರುತಿಸುತ್ತಿಲ್ಲ. ಆತ್ಮ ಶರೀರಬಾಹ್ಯ ಅವಯವಗಳವರೆಗು ವ್ಯಾಪಿಸಿದ್ದು ಕೆಲಸ ಮಾಡಿಸುತ್ತಿದೆಯೆಂದು ಯಾರೂ ಅಂದುಕೊಳ್ಳುತ್ತಿಲ್ಲ. ಭೂಮಿಗೆ ಸೂರ್ಯನು ದೂರವಾಗಿ ಇದ್ದಂತೆ, ಶರೀರದಲ್ಲಿ ಸಹ ಸೂರ್ಯನಿಗೆ ಸಮಾನ ಹೋಲಿಕೆ ಇರುವ ಜೀವಿಯು ಬಾಹ್ಯ ಪ್ರಪಂಚಕ್ಕೆ ಬಹಳ ದೂರವಾಗಿ ಶರೀರದೊಳಗೆ ನಿವಾಸವಿದ್ದಾನೆ. ತಲೆ ಹಣೆಯಭಾಗದಲ್ಲಿ ತಲೆಯೊಳಗೆ ಗುಣಚಕ್ರದಲ್ಲಿ ಸಿಲುಕಿಕೊಂಡ ಜೀವಿಯು ಬಾಹ್ಯ ಅವಯವಗಳೊಂದಿಗೆ ಸಂಬಂಧವಿಲ್ಲದೆ ದೂರವಾಗಿ ಇರುವುದಾರೂ, ಯಾವ ಅವಯವವನ್ನು ಜೀವಿಯು ಕದಲಿಸಿ ಕೆಲಸ ಮಾಡಿಸದಿದ್ದರೂ, ತಾನೇ ಎಲ್ಲಾ ಮಾಡುತ್ತಿದ್ದಹಾಗೆ, ತಾನು ಹೊರಗಿನ ಶರೀರವಾಗಿರುವಂತೆ ತಿಳಿಯುತ್ತಿದ್ದಾನೆ. ಪ್ರತಿ ಒಬ್ಬರು ಶರೀರ ನಾನೇ, ನಾನೇ ಶರೀರವೆಂಬ ಭಾವದಿಂದಿರುವುದರಿಂದ ದೂರವಾಗಿರುವ ಸೂರ್ಯನನ್ನು ಮೊದಲ ದಿನವಾಗಿಟ್ಟು, ಹತ್ತಿರವಾಗಿರುವ ಚಂದ್ರನನ್ನು ಎರಡನೆಯ

ದಿನವಾಗಿಡುವುದು ನಡೆದಿದೆ. ದೂರವನ್ನನುಸರಿಸಿ ಒಳಗಿರುವ ಆತ್ಮವನ್ನಾಗಲಿ, ಹೊರಗಿರುವ ಚಂದ್ರನನ್ನಾಗಲಿ ತಿಳಿದುಕೊಳ್ಳದೆ ಬಾಹ್ಯವಾಗಿರುವ ಬೆಳಕನ್ನನುಸರಿಸಿ, ಅಂತರವಾಗಿರುವ ಭಾವವನ್ನನುಸರಿಸಿ, ಮೊದಲು ಆದಿವಾರವನ್ನು ನಂತರ ಸೋಮವಾರವನ್ನು ಇಡುವುದು ನಡೆದಿದೆ. ಇದನ್ನು ಯಾರಾದರೂ ಅಲ್ಲವೆನ್ನುತ್ತೀರಾ? ಬಾಹ್ಯಕಾಂತಿಯನ್ನನುಸರಿಸಿ, ಅಂತರ್ ಭಾವವನ್ನನುಸರಿಸಿ ಹಿರಿಯರು ನಿರ್ಣಯಿಸಿರುವವೇ ಆದಿ, ಸೋಮ, ಮಂಗಳವಾರಗಳೆಂದು, ಇವುಗಳೇ ಪ್ರಪಂಚ ವ್ಯಾಪ್ತವಾಗಿ ಇಂದಿಗೂ ಇವೆಯೆಂದು ತಿಳಿದಾಗ ಯಾರೂ ಅಲ್ಲವೆನ್ನುವುದಿಲ್ಲ. ಇಂದು ಚಿಕ್ಕದಾಗಿ ಕಾಣಿಸುತ್ತಿರುವ ಇಂದೂ ಸಂಸ್ಕೃತಿ ಪೂರ್ವದಲ್ಲಿ ಪ್ರಪಂಚವ್ಯಾಪ್ತವಾಗಿ ಇರುತ್ತಿತ್ತೆಂದು ಈಗಿರುವ ಸನ್‌ಡೇ (ಆದಿವಾರ)ದಿಂದಲೆ ತಿಳಿಯುತ್ತಿದೆ.

ಸನ್‌ಡೇ (ಆದಿವಾರ) ಆದ ನಂತರ ಮೂನ್‌ಡೇ (ಸೋಮವಾರ) ಬರುತ್ತಿದೆ. ಮೂನ್‌ಡೇ (ಸೋಮವಾರ) ನಂತರ ಸ್ಟಾರ್‌ಡೇ (ನಕ್ಷತ್ರವಾರ) ಬರಬೇಕು. ಆದರೆ ಮೂರನೆಯ ದಿನ ಹಾಗೆ ಸ್ಟಾರ್‌ಡೇ ಅನ್ನದೆ ಟ್ಯೂಸ್‌ಡೇ ಅನ್ನುತ್ತಿದ್ದೇವೆ. ಇಂಗ್ಲೀಷ್ ಭಾಷೆಯಲ್ಲಿ ಟ್ಯೂಸ್‌ಡೇ ಅಂದರೆ ಕೆಂಪನೆಯ ಗ್ರಹವಾದ ಕುಜಗ್ರಹ ದಿನವೆಂದು ಅರ್ಥ. ಇದು ಆಂಗ್ಲಭಾಷೆಯಲ್ಲಿ (ಇಂಗ್ಲೀಷ್‌ನಲ್ಲಿ) ಇರುವ ಮೂರನೆಯ ದಿನವೊಂದರ ಹೆಸರಿರುವಾಗ, ಕನ್ನಡ ಭಾಷೆಯಲ್ಲಿ ಮೂರನೆಯ ದಿನಕ್ಕೆ ನಕ್ಷತ್ರವೊಂದರ ಹೆಸರೇ ಇದೆ. ನಕ್ಷತ್ರವೊಂದರ ಭಾವದ ಪ್ರಕಾರ ಅದನ್ನು ಶುಭಕರದಿನವೆಂದು ಹೇಳುತ್ತಾ ಮಂಗಳವಾರವೆಂದು ಅನ್ನುತ್ತಿದ್ದೇವೆ. ಇಂದೂದೇಶವಾದ ಭಾರತದೇಶದಲ್ಲಿ ಆತ್ಮಜ್ಞಾನವನ್ನನುಸರಿಸಿ ಮೊದಲ ಮೂರು ಹೆಸರುಗಳು ಮೂರು ದಿನಗಳಿಗಿರುವಾಗ, ವಿದೇಶಗಳಲ್ಲಿ ನಮ್ಮ ಇಂದೂ ಸಂಸ್ಕೃತಿಗೆ ಕನ್ನಡಿ ಹಿಡಿದಂತೆ ಮೊದಲ ಎರಡು ದಿನಗಳು ಸೂರ್ಯ ಚಂದ್ರ ದಿನಗಳಾಗಿಯೇ ಇವೆ.

ಷಟ್‌ಶಾಸ್ತ್ರಗಳಲ್ಲಿ ಆರನೆಯ ಶಾಸ್ತ್ರವಾದ ಬ್ರಹ್ಮವಿದ್ಯಾ ಶಾಸ್ತ್ರದಲ್ಲಿ ಅಂದರೆ ಭಗವದ್ಗೀತೆಯಲ್ಲಿ ವಿಶ್ವರೂಪಸಂದರ್ಶನ ಯೋಗದಲ್ಲಿ, 32ನೇ ಶ್ಲೋಕದಲ್ಲಿ

**"ಕಾಲೋಸ್ಮಿ"** ಎನ್ನುವ ಪದವನ್ನು ದೇವರುಪಯೋಗಿಸಿ ಹೇಳಿದ್ದಾನೆ. ಕಾಲೋಸ್ಮಿ ಅಂದರೆ 'ಕಾಲವು ನಾನೇ' ಎಂದು ಅರ್ಥ. ಇದರಿಂದ ದೇವರು ಕಾಣಿಸದ ಕಾಲ ಸ್ವರೂಪನಾಗಿ ಇದ್ದಾನೆಂದು ತಿಳಿಯುತ್ತಿದೆ. ಕಾಣಿಸದ ಕಾಲ ನಮ್ಮಮುಂದೆಯೆ ಕ್ಷಣಕ್ಷಣ ನಡೆಯುತ್ತಿದೆ ಆದರೆ ಕಾಲವೆಂದರೆ ಏನೊ ಯಾರಿಗು ಕಾಣಿಸುವುದಿಲ್ಲ. ಅಷ್ಟೇ ಅಲ್ಲದೆ ಕಾಲ ನಮ್ಮಮುಂದೆಯೇ ದಿನಗಳಾಗಿ, ತಿಂಗಳಾಗಿ, ವರ್ಷಗಳಾಗಿ ನಡೆದುಹೋಗುತ್ತಿದ್ದರೂ, ಅದು ಅರ್ಥವಾಗದಿರುವುದೇ ಆದ್ದರಿಂದ ದೇವರು ಯಾರಿಗೂ ಕಾಣಿಸುವುದಿಲ್ಲ, ತಿಳಿಯುವುದಿಲ್ಲ ಎಂದು ಹೇಳಬಹುದು. ಕಾಣಿಸದ ಅಭೌತಿಕವಾದ ಕಾಲವನ್ನು ಭೌತಿಕವಾದ ಗಣಿತದಿಂದ ದಿನವಾಗಿ, ಮಾಸವಾಗಿ, ಸಂವತ್ಸರವಾಗಿ ಲೆಕ್ಕಿಸಿಕೊಳ್ಳುತ್ತಿದ್ದೇವೆ. ಅಗಮ್ಯವಾದ, ಅಭೌತಿಕವಾದ ಆಕಾಶದಲ್ಲಿ ಭೌತಿಕವಾದ ಸೂರ್ಯ, ಚಂದ್ರ, ನಕ್ಷತ್ರಗಳು ಮೂರು ಹೇಗೆ ತ್ರೈತವಾಗಿ ಕಾಣಿಸುತ್ತಿವೆಯೊ ಹಾಗೆಯೇ ಅಭೌತಿಕವಾದ ಕಾಲ ಸಹ ದಿನ, ತಿಂಗಳು, ಸಂವತ್ಸರ ಎಂಬ ತ್ರೈತವಾಗಿಯೇ ತಿಳಿಯುತ್ತಿದೆ. ಅಷ್ಟೇ ಅಲ್ಲದೆ ಇನ್ನೊಂದು ವಿಧವಾಗಿ ಗಮನಿಸಿದರೆ ಸೃಷ್ಟಿಕರ್ತನಾದ ಕಾಣಿಸದ ಪರಮಾತ್ಮ ಅಂಡಜ, ಪಿಂಡಜ, ಉದ್ಭಿಜ ಎನ್ನುವ ಮೂರು ಕಾಣಿಸುವ ಜೀವರಾಶಿಗಳಾಗಿ ವಿಭಜಿಸಲ್ಪಟ್ಟು ತ್ರೈತವಾಗಿಯೇ ಇದ್ದಾನೆ.

1. **ತಿಳಿಯದ ಆಕಾಶ ಒಂದಾಗಿದ್ದು ತಿಳಿಯುವ ಸೂರ್ಯ, ಚಂದ್ರ, ನಕ್ಷತ್ರಗಳು ಮೂರು (ತ್ರೈತ) ಇವೆ.**

2. **ತಿಳಿಯದ ಕಾಲ ಒಂದಾಗಿದ್ದು ತಿಳಿಯುವ ದಿನ, ಮಾಸ, ಸಂವತ್ಸರ ಮೂರು (ತ್ರೈತ) ಇವೆ.**

3. **ತಿಳಿಯದ ಪರಮಾತ್ಮ ಒಂದಾಗಿದ್ದು ತಿಳಿಯುವ ಅಂಡಜ, ಪಿಂಡಜ, ಉದ್ಭಿಜ ಮೂರು (ತ್ರೈತ) ಇವೆ.**

ಈ ಮೂರರಲ್ಲಿಯೂ ಮೊದಲನೆಯದಾದ ಸೂರ್ಯಚಂದ್ರಾದಿಗಳನ್ನು ಕುರಿತು ತಿಳಿದುಕೊಂಡಿದ್ದೇವೆ. **ಗ್ರಹಗಳಾದ ಸೂರ್ಯಚಂದ್ರಾದಿಗಳ ಗಮನವನ್ನು**

**ತಿಳಿಸುವವು ದಿನಗಳು, ಮಾಸಗಳು, ಸಂವತ್ಸರಗಳು. ದಿನ, ಮಾಸ, ಸಂವತ್ಸರಗಳು ಕಾಲದಲ್ಲಿನ ಭಾಗಗಳೆಂದು ತಿಳಿದುಕೊಂಡಿದ್ದೇವೆ ಅಲ್ಲವೆ! ಕಾಲವಾದ ದೇವರಿಗೆ 108 ಕೋಟಿ ವರ್ಷಗಳು ಹಗಲಾಗಿ ನಿರ್ಣಯಿಸಲ್ಪಟ್ಟಿವೆ. ಈ ವಿಷಯವನ್ನು ಆರನೆಯ ಶಾಸ್ತ್ರದಲ್ಲಿ ಅಕ್ಷರ ಪರಬ್ರಹ್ಮಯೋಗವೆಂಬ ಅಧ್ಯಾಯದಲ್ಲಿ 17ನೇ ಶ್ಲೋಕದಲ್ಲಿ ಹೇಳಲಾಗಿದೆ. ಇದು ಅಲ್ಲಿನ ಶ್ಲೋಕವನ್ನು ಪರಿಶೋಧಿಸಿ ನೋಡಿದರೆ ತಿಳಿಯಲ್ಪಡುತ್ತದೆ. ಶ್ಲೋಕದಲ್ಲಿ ಸಾವಿರಯುಗಗಳು ದೇವರಿಗೆ ಹಗಲಾಗಿ ಹೇಳಲ್ಪಟ್ಟಿದೆ. ಯುಗಗಳು ಇರುವವು ನಾಲ್ಕೆ ಆದ್ದರಿಂದ ಆ ನಾಲ್ಕು ಯುಗಗಳನ್ನು 250 ಸಲ ಲೆಕ್ಕಿಸಿ ನೋಡಿದರೆ ದೇವರಿಗೆ ಒಂದು ಹಗಲು ಕಾಲ ಎಷ್ಟು ವರ್ಷಗಳಾಗಿರುವುದು ತಿಳಿಯುತ್ತದೆ. ದೇವರೊಂದರ ಒಂದು ಹಗಲು ಕಾಲವೇ ಪ್ರಪಂಚ ಒಂದರ ಆಯುಸ್ಸೆಂದು ತಿಳಿಯುತ್ತಿದೆ.**

| | | |
|---|---|---|
| ಕಲಿಯುಗ | 4,32,000 | ವರ್ಷಗಳು |
| ದ್ವಾಪರಯುಗ | 8,64,000 | ವರ್ಷಗಳು |
| ತ್ರೇತಾಯುಗ | 12,96,000 | ವರ್ಷಗಳು |
| ಕೃತಯುಗ | 17,28,000 | ವರ್ಷಗಳು |

ನಾಲ್ಕುಯುಗಗಳು ಸೇರಿ 43,20,000 ವರ್ಷಗಳಾಗಿದ್ದು ಸಾವಿರ ಯುಗಗಳಿಗೆ ಒಟ್ಟು 108 ಕೋಟಿ ವರ್ಷಗಳಾಗುತ್ತಿವೆ. 108 ಕೋಟಿ ವರ್ಷಗಳು, ಕಾಲದ ಲೆಕ್ಕದಲ್ಲಿ (ದೇವರ ಲೆಕ್ಕದಲ್ಲಿ) ಒಂದು ದಿನವಾಗಿ ಲೆಕ್ಕಿಸಲ್ಪಡುತ್ತಿದೆ. ದೇವರ ಒಂದು ಹಗಲನ್ನು ಮಾತ್ರ ಪ್ರಪಂಚ ಆಯುಸ್ಸಾಗಿ ನಿರ್ಣಯಿಸಲಾಗಿದೆ. ಆರನೇ ಶಾಸ್ತ್ರಬದ್ಧವಾದ ಪ್ರಪಂಚ ಆಯುಸ್ಸು ಎಲ್ಲರಿಗೂ ತಿಳಿಯವಂತೆ 108 ಸಂಖ್ಯೆಯನ್ನು ಮುಖ್ಯವಾಗಿ ಅನೇಕ ಸಂದರ್ಭಗಳಲ್ಲಿ ನಾವು ಬಳಸಿಕೊಳ್ಳುತ್ತಿದ್ದೇವೆ. 108 ಸಂಖ್ಯೆ ಸೃಷ್ಠಿಯಿರುವ ಕಾಲವನ್ನು ತಿಳಿಸುತ್ತಿದೆ. ಆದ್ದರಿಂದ ಈ ಸಂಖ್ಯೆ ಎಲ್ಲರಿಗೂ ತಿಳಿಯವಹಾಗೆ ಪ್ರತಿ ಮತದಲ್ಲಿಯೂ ಜಪಮಾಲೆಯನ್ನು ಉಪಯೋಗಿಸುವಹಾಗೆ ಮಾಡಿ ಆ ಜಪಮಾಲೆಯಲ್ಲಿ 108 ಮಣಿಗಳು ಇರುವಹಾಗೆ ದೇವರಿಟ್ಟಿದ್ದಾನೆ. ಪ್ರತಿ ಮನುಷ್ಯನಲ್ಲಿಯೂ ಗುಣಗಳ ಸಂಖ್ಯೆ 108 ಇರುವಹಾಗೆ ಮಾಡಿದ

ದೇವರು, 108 ಗುಣಗಳಿರುವ ಜೀವರಾಶಿ 108 ಕೋಟಿ ವರ್ಷಗಳ ಸೃಷ್ಠಿಯಲ್ಲಿ ಜೀವಿಸುವಹಾಗೆ ಮಾಡಿದ್ದಾನೆ. 108 ಕೋಟಿ ವರ್ಷಗಳ ನಂತರ ಪ್ರಳಯ ಏರ್ಪಡುತ್ತದೆ. ಆಗ ಸರ್ವವೂ ನಾಶವಾಗಬಲ್ಲದು. ಆದ್ದರಿಂದ ಪ್ರಪಂಚ ಆಯುಸ್ಸನ್ನು ಯಾರೂ ಮರೆಯದಂತಿರಲು ಜಪಮಾಲೆಯಲ್ಲಿ 108 ಮಣಿಗಳನ್ನು ಇರಿಸುವುದಲ್ಲದೆ, ದಾನಕೊಡುವ ಸಮಯದಲ್ಲಿ 108 ರೂಪಾಯಿಗಳನ್ನು ಕೊಡುವಹಾಗೆ, ಪೂಜೆ ಮಾಡುವ ಸಮಯದಲ್ಲಿ 108 ಹೂಗಳಿಂದ ಪೂಜಿಸುವಂತೆ ಮಾಡಿದ್ದಾರೆ. ಹಾಗೆಯೇ ಪ್ರತಿ ಮಂತ್ರವನ್ನು 108 ಸಲ ಜಪಿಸುವಂತೆ ಮಾಡಿದ್ದಾರೆ. ಮದುವೆ ಸಮಯದಲ್ಲಿ ಕೊಡುವ ಕಾಣಿಕೆಗಳನ್ನು ಸಹ 108 ಸಂಖ್ಯೆಯಿಂದ ಜೋಡಿಸಿದ್ದಾರೆ. ಹೀಗೆ ಹೊರಗಿನ ಸಮಾಜದಲ್ಲಿ 108 ಸಂಖ್ಯೆಯನ್ನು ಅನೇಕ ಸಂದರ್ಭಗಳಲ್ಲಿ ಬಳಸಿಕೊಳ್ಳುತ್ತಿದ್ದೇವೆ.

ಆದರೂ 108 ಸಂಖ್ಯೆ ಪ್ರಪಂಚ ಆಯುಸ್ಸೆಂದು ಈದಿನ ಬಹಳಜನರಿಗೆ ತಿಳಿಯದಂತೆ ಹೋಗಿದೆ. ಪೂರ್ವದಲ್ಲಿ ಜ್ಞಾನವನ್ನು ತಿಳಿದವರು 108 ಸಂಖ್ಯೆಯನ್ನು ಅನೇಕ ಕಡೆ ಗುರುತಾಗಿ ಇಟ್ಟುಕೊಂಡರೆ, ಈದಿನ ಜ್ಞಾನವನ್ನು ತಿಳಿಯದವರು ಆ ಸಂಖ್ಯೆಯನ್ನು 101ಆಗಿ ಬದಲಾಯಿಸಿಕೊಂಡಿದ್ದಾರೆ. ಕೆಲವರು 116ಆಗಿ ಬದಲಿಸಿಕೊಂಡಿದ್ದಾರೆ. ಇಂತಹವರನ್ನು ನೋಡಿದ ದೇವರು ಪ್ರಾಣಾಪಾಯ ಸ್ಥಿತಿಯಲ್ಲಿ ಆಸ್ಪತ್ರೆಗೆ ತೆಗೆದುಕೊಂಡು ಹೋಗುವ ಅಂಬುಲೆನ್ಸು ವ್ಯಾನ್ ಮೇಲೆ 108 ಸಂಖ್ಯೆಯನ್ನು ಗುರುತಿಸಿ ನಿನ್ನ ಸ್ಥಿರ ಆಯುಸ್ಸು ಇಷ್ಟೇಯೆಂದು ಗುರುತಿರುವಂತೆ ಮಾಡಿದ್ದಾನೆ. ನಿನಗೆ ಅಪಾಯಸ್ಥಿತಿ 108 ಸಂಖ್ಯೆಯಲ್ಲಿಯೆ ಇದೆಯೆಂಬುವಂತೆ, ಅಪಾಯಸ್ಥಿತಿಯಲ್ಲಿ ಮಾಡಬೇಕಾದ ಫೋನ್ ನಂಬರು ಸಹ 108 ಆಗಿಯೇ ಇಟ್ಟಿದ್ದಾನೆ. ಯಾವುದು ಏನಾದರೂ 108 ಸಂಖ್ಯೆ ಪ್ರಪಂಚ ಒಂದರ ಒಟ್ಟು ಆಯುಸ್ಸೆಂದು ಮನುಷ್ಯ ಮರೆತುಹೋಗಿದ್ದಾನೆ. 108 ಕೋಟಿ ವರ್ಷಗಳು ಸಜೀವವಾಗಿರುವ ಪ್ರಕೃತಿ, 108 ಕೋಟಿ ವರ್ಷಗಳ ನಂತರ ಪ್ರಳಯಹೊಂದಿ ವಿಶ್ವವೆಲ್ಲಾ ಇಲ್ಲದೆ ಹೋಗುವುದು. 108 ಕೋಟಿ ವರ್ಷಗಳ ವಿಶ್ವವಿಲ್ಲದ ವಿರಾಮದ ನಂತರ ಪುನಃ ಸೃಷ್ಠಿ ಏರ್ಪಡುತ್ತಿದೆ.

ಪುನಃ ಹೊಸದಾಗಿ ಏರ್ಪಡುವ ಸೃಷ್ಠಿ ಈಗ ಹೇಗಿದೆಯೋ ಹಾಗೆಯೇ ಇರುತ್ತದೆ. ಆಗಲೂ ಸಹ ಮೂರು ವಿಧಗಳ ಶರೀರಗಳಿಂದಲೇ ಜೀವರಾಶಿಗಳು ಉದ್ಭವಿಸುತ್ತವೆ. ಅವುಗಳೇ ತ್ರೈತದ ಪ್ರಕಾರ ಅಂಡಜ, ಪಿಂಡಜ, ಉದ್ಭಿಜಗಳು. ಆಕಾಶದಲ್ಲಿನ ಸೂರ್ಯ, ಚಂದ್ರ, ನಕ್ಷತ್ರಾದಿಗಳಿಗೆ ಕಾಲ ಪರಿಮಾಣಗಳಾಗಿ ದಿನ, ಮಾಸ, ವರ್ಷಗಳು ಇರುವಾಗ, ದಿನ, ಮಾಸ, ವರ್ಷಗಳು ಜೀವರಾಶಿಗಳಾದ ಅಂಡಜ, ಪಿಂಡಜ, ಉದ್ಭಿಜಗಳಿಗು ಆಯುಃಪರಿಮಾಣಗಳಾಗಿ ಇವೆ. ಹೀಗೆ ಒಂದಕ್ಕೊಂದು ಸಂಬಂಧಹೊಂದಿವೆ. ಭೂಮಿಮೇಲೆ ಕಾಣಿಸುವ ಜೀವರಾಶಿಗಳು ಇರುವಾಗ, ಆಕಾಶದಲ್ಲಿ ಕಾಣಿಸುವ ಗ್ರಹಗಳು ಇರುವಾಗ, ಮಧ್ಯದಲ್ಲಿ ಕಾಣಿಸದ ಕಾಲ ದೈವಕ್ಕೆ ಗುರುತಾಗಿದೆ. ಕಾಣಿಸದ ಕಾಲ ದಿನ, ಮಾಸ, ವರ್ಷಗಳ ಪರಿಮಾಣದಿಂದ ಇದೆ. ಅಂತಹ ದಿನಗಳಿಗೆ ಏಳು ಹೆಸರುಗಳು, ಮಾಸಗಳಿಗೆ ಹನ್ನೆರಡು ಹೆಸರುಗಳು, ವರ್ಷಗಳಿಗೆ ಅರವತ್ತು ಹೆಸರುಗಳು ನಮ್ಮ ಹಿರಿಯರಿಟ್ಟಿದ್ದಾರೆ. ಏಳು ದಿನಗಳಲ್ಲಿ ಪ್ರತಿ ದಿನಕ್ಕೆ ಕೊನೆಯಲ್ಲಿ ವಾರ ಎಂದು 7 ಹೆಸರುಗಳಿರುವುದು, ಪ್ರತಿ ತಿಂಗಳಿಗೆ ಕೊನೆಯ ತಿಂಗಳು(ಮಾಸ) ಎಂದು 12 ಹೆಸರುಗಳಿರುವುದು, ಹಾಗೆಯೇ ಸಂವತ್ಸರಕ್ಕೆ ಕೊನೆಯ ವತ್ಸರ ಎಂದು 60 ಹೆಸರುಗಳಿರುವುದು ಗಮನಿಸಬಹುದು. ಕಾಲಕ್ಕೆ ವಾರ, ಮಾಸ, ವತ್ಸರ(ವರ್ಷ)ಗಳೆನ್ನುವ ಹೆಸರುಗಳಿವೆಯೆಂದು ಎಲ್ಲರಿಗೂ ಗೊತ್ತು. ಆದರೆ ಇಲ್ಲಿ ಕಾಲಕ್ರಮವಾಗಿ **"ಮೂಸ" ಅನ್ನುವ ಪದ "ಮಾಸ"** ಎಂದು ಬದಲಾಗಿದೆ. ಆದ್ದರಿಂದ ಎಲ್ಲರಿಗೂ ತಿಳಿದ ಮಾಸ ಪದವನ್ನೇ ನಾವು ಸಹ ಹೇಳಿಕೊಳ್ಳುತ್ತಿದ್ದೇವೆ. ಹಾಗೆಯೇ **"ಯೋಗ"** ಎನ್ನುವ ಪದ **"ಯುಗ"** ಎನ್ನುವ ಪದವಾಗಿ ಬದಲಾಗಿಹೋಗಿದೆ. ಅದನ್ನು ಸಹ ನಾವು ಯುಗ ಎನ್ನುವ ಪದವಾಗಿಯೇ ಹೇಳಿಕೊಂಡಿದ್ದೇವೆಂದು ಗ್ರಹಿಸಬೇಕು. ಉದಾಹರಣೆಗೆ ಚೈತ್ರಮೂಸವು ಚೈತ್ರಮಾಸವಾಗಿ ಹೇಳಿಕೊಳ್ಳುತ್ತಿದ್ದೇವೆ. ಅದೇ ವಿಧವಾಗಿ ಕಲಿಯೋಗವನ್ನು ಕಲಿಯುಗವಾಗಿ ಬರೆದುಕೊಂಡಿದ್ದೇವೆ.

ಕಾಲದಲ್ಲಿಯೆ ಪ್ರತಿ ಜೀವರಾಶಿ ಹುಟ್ಟುತ್ತಿದೆ. ಅಂದರೆ ದೈವವು ಪ್ರತಿ ಜೀವರಾಶಿಯನ್ನು ಸೃಷ್ಟಿಸುತ್ತಿದ್ದಾನೆಂದು ಪ್ರತ್ಯಕ್ಷವಾಗಿ ತಿಳಿಯುತ್ತಿದೆ. ಕಾಣಿಸದ ದೈವವು ಪ್ರತಿ ಜೀವರಾಶಿಯನ್ನು ವ್ಯತ್ಯಾಸ ಹೊಂದಿದ ಆಕಾರದಿಂದ ಹುಟ್ಟಿಸುತ್ತಿದ್ದಾನೆ. ಆದ್ದರಿಂದ ಕಾಲಕ್ಕೆ ವಾರ, ಮಾಸ, ವತ್ಸರವೆಂದು ಹೆಸರುಗಳಿಡುವುದು ನಡೆದಿದೆ. ವಾರ ಅಂದರೆ ವ್ಯತ್ಯಾಸ ಹೊಂದಿದ, ಮಾಸ ಅಂದರೆ ಆಕಾರವಾಗಿ, ವತ್ಸರ ಅಂದರೆ ಹುಟ್ಟಿಸಲ್ಪಟ್ಟಿರುವುದೆಂದು ಅರ್ಥ.ಈ ಅರ್ಥದ ಪ್ರಕಾರ ಹುಟ್ಟಿದ ಮನುಷ್ಯ ಮನುಷ್ಯನಿಗು ವ್ಯತ್ಯಾಸ ಹೊಂದಿದ ಆಕಾರ ಇದೆಯೆಂದು ಎಲ್ಲರಿಗೂ ತಿಳಿಯುತ್ತಿದೆ. ಪ್ರತಿ ಮನುಷ್ಯನಿಗು ಸ್ವಲ್ಪಮಟ್ಟಿನ ಮುಖವರ್ಚಸ್ಸಿನಲ್ಲಿಯೇ ಎಷ್ಟೋ ವ್ಯತ್ಯಾಸಗಳಿರುವುದನ್ನು ಎಲ್ಲರೂ ಗ್ರಹಿಸಬಹುದು. ಇದರಿಂದ ಪ್ರತಿ ಮನುಷ್ಯ ವಾರಾದಿಂದ (ವ್ಯತ್ಯಾಸ) ಮೂಸ (ಮುದ್ರೆ) ಹಾಕಲ್ಪಟ್ಟ ಆಕಾರದಿಂದ ವತ್ಸರಿಸಲ್ಪಡು(ಹುಟ್ಟಿಸಲ್ಪಡು)ತ್ತಿದ್ದಾನೆಂದು ತಿಳಿಯುತ್ತಿದೆ. ಇಲ್ಲಿ ವಾರ ಎನ್ನುವುದು ಏಳು ಹೆಸರುಗಳು ಹೊಂದಿರುವುದು ಎಲ್ಲರಿಗೂ ಗೊತ್ತು. ವಾರಕ್ಕೆ ಏಳು ಹೆಸರುಗಳೇ ಏಕೆ ಇಟ್ಟಿದ್ದಾರೆ?ಎಂದು ಪ್ರಶ್ನಿಸಿಕೊಂಡು ನೋಡಿದರೆ ಆ ಪ್ರಶ್ನೆಗೆ ಉತ್ತರ ಈ ವಿಧವಾಗಿ ತಿಳಿಯುತ್ತಿದೆ.

ಭೂಮಿ ಮೇಲಿರುವ ಪ್ರತಿ ಮನುಷ್ಯ ಹೊರಗೆ ಕಾಣಿಸುವ ಸೂರ್ಯ ಚಂದ್ರ ನಕ್ಷತ್ರಾದಿಗಳ ಬೆಳಕಿನಲ್ಲಿಯೂ, ಒಳಗೆ ಕಾಣಿಸದ ಮೂರು ಆತ್ಮಗಳ ಪ್ರಭಾವದಿಂದಲೂ ಜೀವಿಸಲಾಗುತ್ತಿದ್ದಾನೆ. ಹೊರಗೆ ಗ್ರಹಗಳ ಕಾಂತಿ ಕಿರಣ ಏಳು ವ್ಯತ್ಯಾಸಗಳಿಂದ (ವಾರಗಳಾಗಿ) ಇದೆ. ಹಾಗೆಯೇ ಒಳಗೆ ಆತ್ಮಗಳ ಪ್ರಭಾವ ಸಹಾ ಏಳು ವಾರಗಳಾಗಿ ಭಿನ್ನವಾಗಿದೆ. ಕಾಂತಿ ಕಿರಣಗಳನ್ನು ವಿಭಜಿಸಿದರೆ ಏಳು ವಿಧ ಬಣ್ಣಗಳು ತಿಳಿಯುತ್ತಿವೆ. ಆತ್ಮಶಕ್ತಿಯನ್ನು ವಿಭಜಿಸಿದರೆ ಏಳು ನಾಡಿಕೇಂದ್ರಗಳಲ್ಲಿ ಏಳು ವಿಧಗಳ ಶಕ್ತಿಯಾಗಿದೆ. ಆದ್ದರಿಂದ ಮನುಷ್ಯ ಜೀವಿಸುವ ದಿನಕ್ಕೆ ಏಳು ಹೆಸರುಗಳು ಇಡಬೇಕಾಗಿಬಂದಿದೆ. ಆ ಏಳು ಹೆಸರುಗಳಲ್ಲಿ ಮೊದಲಿರುವ ಮೂರು ಹೆಸರುಗಳು ಸೂರ್ಯ, ಚಂದ್ರ, ನಕ್ಷತ್ರಗಳಿಗೆ ಸಂಬಂಧಿಸಿರುವವಾಗಿ ಇರುವುದು ಗಮನಿಸಬೇಕಾದ ವಿಷಯ. ಪ್ರಸ್ತುತ ಕಾಲದಲ್ಲಿ

ನಾಗರಿಕತೆ ಅನ್ನುವ ಹೆಸರಿನಿಂದ, ವಿಜ್ಞಾನವೆಂಬ ಓದಿನಿಂದ ಅಜ್ಞಾನದಲ್ಲಿ ಮುಳುಗಿಹೋದ ಮನುಷ್ಯ, ಆದಿ, ಸೋಮ, ಮಂಗಳವಾರಗಳ ವಿಶಿಷ್ಟತೆಯನ್ನು ವಿಸ್ಮರಿಸಿದವನಾಗಿ, ತನಗೆ ಸಂಬಂಧಿಸಿದ ಜ್ಞಾನವನ್ನು ತಾನೇ ತಿಳಿದುಕೊಳ್ಳ ದೆಹೋಗಿದ್ದಾನೆ. ವಿಜ್ಞಾನ ಹೊಂದಿ ಸುಖಗಳಲ್ಲಿ ಮುಳುಗಿಹೋದ ಈಗಿನ ಮನುಷ್ಯರಿಗಿಂತ ಆತ್ಮಜ್ಞಾನ ಹೊಂದಿ ಆದಿ, ಸೋಮ, ಮಂಗಳವಾರಗಳ ಅರ್ಥವನ್ನು ತಿಳಿದ ಪೂರ್ವದಲ್ಲಿನ ಮನುಷ್ಯರೇ ಎಷ್ಟೋ ಉತ್ತಮರೆಂದು ತಿಳಿಯುತ್ತಿದೆ.

ಪ್ರತಿ ಮನುಷ್ಯ ವ್ಯತ್ಯಾಸ ಹೊಂದಿದ ಮುಖದಿಂದ, ಮೂಸಹಾಕಿದ ಆಕಾರದಿಂದ, ಹುಟ್ಟಿಸಲ್ಪಟ್ಟಿದ್ದಾನೆಂದು ಎಲ್ಲರಿಗೂ ತಿಳಿದಿದೆ. ಅಂತಹ ಮನುಷ್ಯ ಸೂರ್ಯ, ಚಂದ್ರ, ನಕ್ಷತ್ರ ಮೂರು ಗ್ರಹಗಳ ಕಾಂತಿಯಲ್ಲಿ, ಮೂರು ಆತ್ಮಗಳ ಪ್ರಭಾವದಲ್ಲಿ ಬದುಕುತ್ತಿದ್ದಾನೆ. ದೇವರು ಆಕಾಶದಲ್ಲಿ ಭೌತಿಕವಾಗಿ ಕಾಣಿಸುವ ಎರಡು ಗ್ರಹಗಳಾಗಿ, ಒಂದು ಅಗ್ರಹ ನಕ್ಷತ್ರವಾಗಿ ಶರೀರದಲ್ಲಿ ಕಾಣಿಸದ ಮೂರು ಆತ್ಮಗಳಾಗಿ ಇದ್ದಾನೆಂದು ಹೇಳಿಕೊಂಡಿದ್ದೇವೆ ಅಲ್ಲವೆ! ಇದನ್ನನುಸರಿಸಿ ಪ್ರತಿಮನುಷ್ಯ ಇತ್ತ ಹೊರಗಿನ ಗ್ರಹಗಳಿಂದ, ಅತ್ತ ಒಳಗಿನ ಆತ್ಮಗಳಿಂದ ಒಟ್ಟಾರೆ ದೈವದಿಂದ ಜೀವಿಸುತ್ತಿದ್ದಾನೆಂದು ತಿಳಿಯುತ್ತಿದೆ.

**ದೈವವು ಕಾಣಿಸುವ ವಿಧವಾಗಿ ಸೂರ್ಯ ಚಂದ್ರ ನಕ್ಷತ್ರಗಳಾಗಿ**<br>
**ದೈವವು ಕಾಣಿಸದ ವಿಧವಾಗಿ ಜೀವಾತ್ಮ ಆತ್ಮ ಪರಮಾತ್ಮಗಳಾಗಿ** } **ವಿಭಜಿಸಲ್ಪಟ್ಟಿದೆ.**

ದೈವಪ್ರಭಾವದಲ್ಲಿ ಇತ್ತ ಹೊರಗೆ, ಅತ್ತ ಒಳಗೆ ಜೀವಿಸುವ ಮನುಷ್ಯ ಹೊರಗಿನ ಸೂರ್ಯ, ಚಂದ್ರ, ನಕ್ಷತ್ರಗಳನ್ನು, ಒಳಗಿನ ಜೀವಾತ್ಮ, ಆತ್ಮ, ಪರಮಾತ್ಮಗಳನ್ನು ತಿಳಿದು ಆರಾಧಿಸುವುದನ್ನೇ ತ್ರೈತಾರಾಧನೆ ಎನ್ನುತ್ತಿದ್ದೇವೆ. ತ್ರೈತಾರಾಧನೆಯಲ್ಲಿ ಹೊರಗಿನ ಸೂರ್ಯ, ಚಂದ್ರ, ನಕ್ಷತ್ರಗಳ ಗುರುತುಗಳಾದ ಆದಿ, ಸೋಮ, ಮಂಗಳವಾರಗಳಲ್ಲಿ ಮೂರು ಆತ್ಮಗಳನ್ನು ಆರಾಧಿಸುವುದನ್ನೇ ತ್ರೈತಾರಾಧನೆ ಎನ್ನುತ್ತಿದ್ದೇವೆ. ಕೆಲವರು ಹಿರಿಯರು ಜ್ಞಾನವನ್ನು ತತ್ತ್ವಗಳನ್ನು

ಹಾಡುಗಳ ರೂಪದಲ್ಲಿ ಹಾಡುವಾಗ 'ಮೂರು ದಿನಗಳ ಜೀವನಕ್ಕೆ ಮೆರೆಯುತ್ತಿರುವೆ ಏಕೆ ಜೀವಾ' ಎಂದು ಹಾಡುತ್ತಿರುವುದು ಕೇಳಿದ್ದೇವೆ. ಇದನ್ನನುಸರಿಸಿ ನಮ್ಮ ಜೀವನವು ಮೂರು ದಿನಗಳೇನಾ ಎಂದು ಯೋಚಿಸಿದರೆ ಒಂದು ದಿನ ಹುಟ್ಟುವುದಕ್ಕೆ, ಒಂದು ದಿನ ಜ್ಞಾನ ತಿಳಿದುಕೊಳ್ಳುವುದಕ್ಕೆ, ಒಂದು ದಿನ ಮೋಕ್ಷವನ್ನು ಹೊಂದುವುದಕ್ಕೆಂದು ತಿಳಿಯುತ್ತಿದೆ. ಮೊದಲ ದಿನ ಜೀವಿಯು ಹುಟ್ಟಿ, ಎರಡನೆಯ ದಿನ ಆತ್ಮವನ್ನು ತಿಳಿದುಕೊಂಡು, ಮೂರನೆಯ ದಿನ ಪರಮಾತ್ಮನಲ್ಲಿ ಸೇರಬೇಕೆಂದು ಸಹ ತಿಳಿಯುತ್ತಿದೆ. ಆದ್ದರಿಂದ ಕೆಲವರು ಕವಿಗಳು, ಹಿರಿಯರು **'ಎಷ್ಟೋ ಚಿಕ್ಕದು ಜೀವನ, ಇನ್ನೂ ಚಿಕ್ಕದು ಯೌವನ'** ಎಂದಿದ್ದಾರೆ. ಈ ವಿಷಯವನ್ನು ಬದುಕಿರುವವರು ತಿಳಿದುಕೊಳ್ಳುವುದಕ್ಕೆ ಸತ್ತವರಿಗೆ ಮೂರನೆಯ ದಿನ ಮಾಡುತ್ತಿದ್ದರು. ಇದರಿಂದ ನಮಗೆ ತಿಳಿದರೂ, ತಿಳಿಯದಿದ್ದರೂ ಜೀವನ ಮೂರು ದಿನಗಳ ಸಂಭ್ರಮ (ಹಿಗ್ಗು) ಎಂದು ತಿಳಿಯುತ್ತಿದೆ. ಸಂಭ್ರಮ ಎಂದರೆ ಸಂತೋಷದಿಂದ ಒಂದು ವಿಷಯವನ್ನು ಕುರಿತು ಮಾತನಾಡುಕೊಳ್ಳುವುದು ಎಂದು ಅರ್ಥ. ಮೂರುದಿನಗಳ ಸಂಭ್ರಮ ಎಂದರೆ ಆದಿ, ಸೋಮ, ಮಂಗಳ ಅನ್ನುವ ಮೂರು ದಿನಗಳಲ್ಲಿನ ವಿಷಯವನ್ನು ತಿಳಿದುಕೊಳ್ಳುವುದೆಂದು ಅರ್ಥ. ಹಾಗೆ ತಿಳಿದುಕೊಳ್ಳದೆ ಹೋದರೆ ಪ್ರಪಂಚದಲ್ಲಿ ಯಾರು ಯಾವ ಸ್ಥಾನದಲ್ಲಿ ಬದುಕಿದರೂ ಅವರ ಜೀವನ ವ್ಯರ್ಥವೆಂದೇ ತಿಳಿಯುತ್ತಿದೆ. ಆದ್ದರಿಂದ ಭೂಮಿಮೇಲೆ ಹುಟ್ಟಿದ ಪ್ರತಿ ಮನುಷ್ಯ ಯಾವ ಮತಸ್ಥನಾದರೂ ತ್ರೈತಾರಾಧನೆಯನ್ನು ತಿಳಿದಿರಲೇ ಬೇಕು ಮತ್ತು ಮಾಡಬೇಕಾಗಿದ್ದೇ. ಇದು ಆತ್ಮಗಳಿಗೆ ಸಂಬಂಧಿಸಿದ ಜ್ಞಾನ ಆದ್ದರಿಂದ ಮನುಷ್ಯರೆಲ್ಲರಿಗೂ ಬೇಕಾದ, ಮತಗಳಿಗೆ ಅತೀತವಾದ ಆಚರಣೆ ಎಂದು ತಿಳಿಯಬೇಕು.

ತ್ರೈತಾರಾಧನೆ ಭಾವಪೂರಿತವಾದುದು. ಆದ್ದರಿಂದ ಏಳು ದಿನಗಳಲ್ಲಿ ಮೊದಲ ಮೂರು ದಿನಗಳಾದ ಆದಿ, ಸೋಮ, ಮಂಗಳವಾರಗಳಲ್ಲಿ ಮಾಡುವುದಲ್ಲದೆ, ಶರೀರದಲ್ಲಿನ ಏಳು ನಾಡಿಕೇಂದ್ರಗಳಲ್ಲಿ ಮೊದಲ ಮೂರು ಕೇಂದ್ರಗಳಾದ ಕಂಠಸ್ಥಾನವನ್ನೂ, ಭ್ರೂಮಧ್ಯಸ್ಥಾನವನ್ನೂ, ಕಪಾಳಸ್ಥಾನವನ್ನು

ಗುರುತಿಸಿಕೊಂಡು ಮೂರು ಸ್ಥಾನಗಳೊಳಗೇ ತಲೆಯಲ್ಲಿ ಧ್ಯಾಸ ಇರುವಂತೆ ಮಾಡುವುದಕ್ಕೆ ಆರಾಧನೆ ಸಮಯದಲ್ಲಿ ಬಲಗೈ ಹಸ್ತವನ್ನು ತಲೆ ಮೇಲೆ, ಎಡಗೈ ಹಸ್ತವನ್ನು ಗಡ್ಡದ ಕೆಳಗೆ ಇಟ್ಟುಕೊಳ್ಳಬೇಕು. ಮೂರು ಆತ್ಮಗಳಿಗು ಗುರುತಾಗಿ ಮೂರು ಕೋನಗಳ ಬಟ್ಟೆಯನ್ನು ತಲೆಗೆ ಕಟ್ಟಿಕೊಳ್ಳಬೇಕು. ಈಗ ಇದೆಲ್ಲವೂ ಹೊಸದಾಗಿ ಕಾಣಿಸಿದರೂ, ಇದೇನೊ ಪರಮತಬೋಧನೆ ಎಂದು ಕೆಲವರಿಗನಿಸಿದರೂ, ಪೂರ್ವದಲ್ಲಿ ಕೆಲವು ಲಕ್ಷ ವರ್ಷಗಳ ಪೂರ್ವದಲ್ಲಿ ಯಾವ ಮತವಿಲ್ಲದ ಕಾಲದಲ್ಲಿ ತ್ರೈತಾರಾಧನೆಯನ್ನು ಜ್ಞಾನಿಗಳು ಆಚರಿಸುತ್ತಿದ್ದರೆಂದು ತಿಳಿಯಬೇಕು. ಅಷ್ಟು ವರ್ಷಗಳ ಪೂರ್ವವಿರುವುದು ನಮಗಾಗಲಿ, ಯಾವ ಪೀಠಾಧಿಪತಿಗಾಗಲಿ, ಯಾವ ಮಠಾಧಿಪತಿಗಾಗಲಿ ತಿಳಿಯದಿರುವುದು ಈಗ ನಿನಗೆ ಹೇಗೆ ತಿಳಿದಿದೆಯೆಂದು ಕೆಲವರಿಗೆ ಪ್ರಶ್ನೆಬರಬಹುದು. ಅದಕ್ಕೆ ಉತ್ತರ ನನಗೂ ಸಹ ತಿಳಿಯದು. ಆದರೆ ನನ್ನಲ್ಲಿನ ಎರಡನೆಯವನಾದ ಆತ್ಮಕ್ಕೆ ಎಲ್ಲಾ ತಿಳಿದಿವೆ ಆದ್ದರಿಂದ ಆತನು ಹೇಳಿ ಬರೆಯಿಸುತ್ತಿರುವುದು ಬರೆಯುತ್ತಿದ್ದೇನೆ. ನಿನ್ನಲ್ಲಿ ಸಹ ಆತ್ಮ ಇದೆ, ಆದರೂ ನೀನು ಕೇಳುವುದಿಲ್ಲ ಆತನು ಹೇಳುವುದಿಲ್ಲ, ಅಷ್ಟೇ ನಿಮಗೂ ನನಗೂ ವ್ಯತ್ಯಾಸ. ಇನ್ನೂ ಆತನು ಹೇಳುವುದೇನೆಂದರೆ! ವಾರದಲ್ಲಿ ಮೊದಲಿರುವ ಆದಿ, ಸೋಮ, ಮಂಗಳ ವಾರಗಳನ್ನು ಕುರಿತು ನಿಮಗೆ ತಿಳಿಯದಿರುವುದನ್ನು ವಿವರವಾಗಿ ಹೇಳುತ್ತೇನೆ ಶ್ರದ್ಧೆಯಿಂದ  ಕೇಳಿರಿ ಎನ್ನುತ್ತಿದ್ದಾನೆ.

# ಆದಿತ್ಯವಾರ (ರವಿವಾರ)

"ಆದಿ" ಅಂದರೆ ಪ್ರಪಂಚ ರೀತಿಯಲ್ಲಿ ಮೊದಲನೆಯದೆಂದು ಅರ್ಥ. ಆಧ್ಯಾತ್ಮಿಕ ರೀತಿಯಲ್ಲಿ  ಸಾವುಹುಟ್ಟುಗಳಿರುವ ಕ್ಷರಾತ್ಮನಾದ ಜೀವಾತ್ಮನೆಂದು ಅರ್ಥ. ದೇವರು ಜೀವಿಗೋಸ್ಕರವೆ ಸೃಷ್ಠಿಯನ್ನು ಪ್ರಾರಂಭಿಸಬೇಕಾಗಿ ಬಂದಿದೆ. ಮೊದಲು ಜೀವಿಯನ್ನು ಸೃಷ್ಠಿಸಿದ ದಿನವನ್ನು ಪ್ರಾಪಂಚಿಕವಾಗಿ ಆದಿವಾರವೆಂದು,

ಆಧ್ಯಾತ್ಮಿಕದ ಪ್ರಕಾರ ರವಿ (ಸೂರ್ಯನ) ದಿನವೆಂದು ಹೇಳುತ್ತಿದ್ದೇವೆ. ಪ್ರಪಂಚ ರೀತಿಯಲ್ಲಿ ಮೊದಲ (ಆದಿ) ದಿನವಾದರೂ ಸಾವುಹುಟ್ಟುಗಳಿಂದ ಸಮಾನವಾಗಿ ಉದಯಿಸುತ್ತಾ ಮತ್ತು ಅಸ್ತಮಿಸುತ್ತಾ ಸೂರ್ಯನು ಜೀವಿಯಂತೆ ಇದ್ದಾನೆ ಆದ್ದರಿಂದ ಆದಿವಾರವನ್ನು ರವಿವಾರವೆಂದು ಸಹ ಎನ್ನುತ್ತಿದ್ದೇವೆ. ಯಾವುದು ಏನಾದರೂ ಸೃಷ್ಠಿ ಆವಿರ್ಭವಿಸಿದ ದಿನ ಆದಿವಾರ. ದೈವವು ಪ್ರತ್ಯಕ್ಷವಾಗಿ ಇದ್ದೂ ಇತ್ತ ಆತ್ಮವನ್ನೂ, ಅತ್ತ ಜೀವಾತ್ಮವನ್ನು ಶರೀರದಿಂದ ಹುಟ್ಟಿಸಿದ ದಿನ ಆದಿವಾರ. ಮೂರು ಆತ್ಮಗಳಲ್ಲಿ ನಮ್ಮಿಂದ ಮೊದಲನೆಯದು ಜೀವಾತ್ಮ, ಎರಡನೆಯದು ಆತ್ಮ, ಮೂರನೆಯದು ಪರಮಾತ್ಮ ಇರುವಾಗ ಮೊದಲನೆ ಜೀವಾತ್ಮ ಉದ್ಭವಿಸಿದ ದಿನವಾದ್ದರಿಂದ ಅದನ್ನು ಆದಿವಾರ ಅನ್ನುತ್ತಿದ್ದೇವೆ. ಹೊರಗಿನ ಸೂರ್ಯನ ದಿನವಾದ ರವಿವಾರವೆಂದರೂ, ಒಳಗಿನ ಜೀವಾತ್ಮ ದಿನವೆಂದು ಆದಿವಾರವೆಂದರೂ ಎರಡೂ ಒಂದೇಯೆಂದು ತಿಳಿಯಬೇಕು. ದೇವರು ತನ್ನ ಪ್ರಕೃತಿಯಿಂದ ಜೀವಿಗಳನ್ನು ಸೃಷ್ಠಿಸಿದ ಕಾರ್ಯ ಆರಂಭ ದಿನವಾದ್ದರಿಂದ ಇದನ್ನು "ದೈವಕಾರ್ಯ ಆರಂಭದಿನ" ಅನ್ನುತ್ತಿದ್ದೇವೆ. ದೇವರು ತನ್ನ ಸಂಕಲ್ಪದಿಂದ ಸರ್ವವನ್ನು ಸೃಷ್ಠಿಸಿದ ದಿನವಾದ್ದರಿಂದ ಮೊದಲ ದಿನವಾದ ಆದಿವಾರವನ್ನು ಸಂಕಲ್ಪದಿನವೆಂದು ಸಹ ಪೂರ್ವದಲ್ಲಿ ಅನ್ನುತ್ತಿದ್ದರು. ಎಲ್ಲದಕ್ಕಿಂತ ಶ್ರೇಷ್ಠವಾದ ದೇವರಿಂದ ತಯಾರಾದ ದಿನವಾದ್ದರಿಂದ ಶ್ರೇಷ್ಠದಿನವೆಂದೂ, ಪವಿತ್ರವಾದ ದೇವರಿಂದ ತಯಾರಾದ ದಿನವಾದ್ದರಿಂದ ಪವಿತ್ರದಿನವೆಂದು ಆದಿವಾರಕ್ಕೆ ಹೆಸರುಗಳು ಇವೆ. ಈಗ ಈ ವಿಧವಾಗಿ ಬದಲಾಗಿದ್ದರೂ ಪೂರ್ವದಲ್ಲಿ ಮೊದಲ ದಿನವನ್ನು ಆದಿವಾರವೆಂದೂ, ದೈವಕಾರ್ಯ ಆರಂಭ ದಿನವೆಂದೂ, ಶ್ರೇಷ್ಠದಿನವೆಂದೂ, ಪವಿತ್ರದಿನವೆಂದೂ ದೊಡ್ಡದಾಗಿ ಹೇಳಿಕೊಳ್ಳುತ್ತಿದ್ದರು.

ಒಂದು ವಿಧವಾಗಿ ಹೇಳಿದರೆ ರೋಮ್, ಗ್ರೀಕ್‌ದೇಶಗಳಲ್ಲಿ ದೇವತೆಗಳ ಮೇಲೆ ಗ್ರಹಗಳ ಮೇಲೆ ಭಕ್ತಿ ಹೆಚ್ಚಾಗಿ ಇದ್ದರೂ ನಮ್ಮ ದೇಶದಲ್ಲಿ ಆ ದೇಶಗಳನ್ನು ಮೀರಿದ ಜ್ಞಾನವಿರುತ್ತಿತ್ತು. ಆದ್ದರಿಂದ ಜ್ಞಾನದಲ್ಲಿ ಅಗ್ರದೇಶವಾದ್ದರಿಂದ ನಮ್ಮ

ದೇಶವನ್ನು ಇಂದೂದೇಶವೆಂದು ಮೊದಲಿನಿಂದ ಎಲ್ಲಾ ದೇಶದವರು ಕರೆಯುತ್ತಿದ್ದರು. ಮೊದಲು ಇಂದೂ (ಜ್ಞಾನ) ದೇಶವಾದ ನಮ್ಮ ದೇಶಕ್ಕೆ ಭರತನ ಕಾಲದಿಂದ ಭಾರತದೇಶವೆಂದು ಹೆಸರು ಬಂದಿದೆ. ಇದನ್ನು ಭಾರತದೇಶವೆಂದರೂ ಆದಿಯಿಂದ ಜ್ಞಾನವಿರುವ ದೇಶವಾದ್ದರಿಂದ ಇದಕ್ಕೆ ಇಂದೂದೇಶ ಎಂಬುವ ಹೆಸರು ಅಂಟಿಕೊಂಡು ಹೋಗಿದೆ. ಇಂದೂತ್ವ ಎಂದರೆ ದೈವಜ್ಞಾನ ಈ ದೇಶದಲ್ಲಿ ಇಲ್ಲದಂತೆ ಹೋಗಿ ಇಂದೂ ಅನ್ನುವ ಪದವು ಹಿಂದೂವಾಗಿ ಬದಲಾಗಿಹೋಗಿದೆಯೆಂದು ನಾವು ಅನೇಕ ಸಂದರ್ಭಗಳಲ್ಲಿ ಹೇಳಿದ್ದೇವೆ. ಇಂದೂ ಎನ್ನುವ ಶಬ್ದ ಸ್ವಲ್ಪ ಬದಲಾವಣೆಹೊಂದಿ ಹಿಂದೂ ಎಂದು ಹೇಳಲ್ಪಡುತ್ತಿದ್ದರೂ ಜ್ಞಾನದಲ್ಲಿ ಇತರ ದೇಶಗಳಿಗಿಂತ ಈ ದೇಶವೆ ದೊಡ್ಡದು. ಆದ್ದರಿಂದ ಅರ್ಥವನ್ನು ತಿಳಿದು ಈ ದೇಶವನ್ನು ಇಂದೂದೇಶವಾಗಿ ಹೇಳಿಕೊಳ್ಳೋಣ. ಈ ದೇಶ ಜ್ಞಾನವಿರುವ ದೇಶವೆಂದು ತಿಳಿದು ನಮ್ಮ ದೇಶದಲ್ಲಿ ಹೇಳಿದ ಜ್ಞಾನವನ್ನು ಮೊದಲು ಪ್ರಪಂಚದೇಶಗಳೆಲ್ಲ ಅನುಸರಿಸುತ್ತಿದ್ದವು. ಅಂದರೆ ಇಂದೂದೇಶವಾದ ಭಾರತದೇಶ ಎಲ್ಲಾ ದೇಶಗಳಿಗು ಮಾರ್ಗದರ್ಶಕವಾಗಿ ಇರುತ್ತಿತ್ತೆಂದು ಅರ್ಥವಾಗುತ್ತಿದೆ. ಎಲ್ಲಾ ದೇಶಗಳಿಗು ಮಾರ್ಗದರ್ಶಕವಾದ ಇಂದೂದೇಶದಲ್ಲಿಯೇ ಸೂರ್ಯಚಂದ್ರ ನಕ್ಷತ್ರ ವರಸೆ ಕ್ರಮವೂ, ಅದರ ಮೂಲಕ ಜ್ಯೋತಿಷ್ಯಶಾಸ್ತ್ರವೂ ಹೊರಗೆ ಬಂದಿವೆ. ಸೂರ್ಯನು ಮೊದಲನೆಯವನೆಂದು, ಏಳು ದಿನಗಳಲ್ಲಿ ಮೊದಲನೆಯದು ಆದಿವಾರವೆಂದು ಇಂದೂಗಳು ಹೇಳಿದಂತೆ ಪ್ರಪಂಚದೇಶಗಳೆಲ್ಲವೂ ಆದಿವಾರವನ್ನೇ ಮೊದಲ ದಿನವಾಗಿ ಇಟ್ಟುಕೊಂಡಿವೆ. ಆದಿವಾರ ದೇವರು ಸೃಷ್ಠಿಸಿದ, ತಯಾರು ಮಾಡಿದ ಪವಿತ್ರ ದಿನವಾದ್ದರಿಂದ ಆ ದಿನವನ್ನು ಪವಿತ್ರವಾಗಿ ಇಟ್ಟುಕೊಂಡು ದೇವರ ಧ್ಯಾಸದಲ್ಲಿಯೇ, ದೇವರ ಜ್ಞಾನದಲ್ಲಿಯೇ ಇಂದೂಗಳು ಕಳೆಯುತ್ತಿದ್ದರು. ಆ ದಿನ ಯಾವ ಕೆಲಸವನ್ನು ಮಾಡದಂತೆ ಸೃಷ್ಟಿ ಆವಿರ್ಭದಿನವಾಗಿ, ತಾವು ಹುಟ್ಟಿದ ದಿನವಾಗಿ ಹೇಳಿಕೊಳ್ಳುತ್ತಾ ಸೃಷ್ಠಿಕರ್ತನಾದ ದೇವರ ಶ್ರೇಷ್ಠತ್ವವನ್ನು ಕೊಂಡಾಡುತ್ತಿದ್ದರು. ಆದ್ದರಿಂದ ಆದಿವಾರವನ್ನು ಇಂದೂಗಳು ರಜಾದಿನವಾಗಿ ಇಟ್ಟುಕೊಂಡು ಯಾವ ಕೆಲಸವನ್ನು ಮಾಡದಂತೆ ದೇವರ ಜ್ಞಾನವನ್ನು ತಿಳಿದುಕೊಳ್ಳುವುದಕ್ಕೆ ಉಪಯೋಗಿಸುತ್ತಿದ್ದರು.

ಇಂದೂದೇಶದ ಪ್ರಜೆಗಳು ಎಲ್ಲಾ ದೇಶಪ್ರಜೆಗಳಿಗೆ ಆದರ್ಶವಾಗಿ ಇರುವುದರಿಂದ ಇಂದೂಗಳಂತೆ ಪ್ರಪಂಚ ದೇಶಗಳೆಲ್ಲವೂ ಆದಿವಾರವನ್ನು ಮೊದಲ ದಿನವಾಗಿ ಇಟ್ಟುಕೊಳ್ಳುವುದಲ್ಲದೆ ಆದಿವಾರವನ್ನು ಅವರು ಸಹ ಪವಿತ್ರ ದಿನವಾಗಿ, ರಜಾದಿನವಾಗಿ ಮಾಡಿಕೊಂಡಿದ್ದಾರೆ. ಇಂಗ್ಲೀಷ್‌ನಲ್ಲಿ ಹೋಲಿಡೇ (HOLYDAY) ಅಂದರೆ ಪವಿತ್ರದಿನವೆಂದು ಅರ್ಥ. ಪೂರ್ವದಲ್ಲಿ ಆದಿವಾರವನ್ನು ವಿದೇಶಗಳಲ್ಲಿ ಸಹ ಹೋಲಿಡೇ ಎಂದು ಅನ್ನುತ್ತಿದ್ದರು. ಕಾಲಕ್ರಮದಲ್ಲಿ ಹೋಲಿಡೇ ಸ್ವಲ್ಪ ಹಾಲಿಡೇಯಾಗಿ ಬದಲಾಗಿಹೋಗಿದೆ. ಪವಿತ್ರ ದಿನವನ್ನು ರಜಾದಿನವಾಗಿ ಇಟ್ಟುಕೊಳ್ಳುವ ಆಚಾರ ಪೂರ್ವದಿಂದ ವಿದೇಶಗಳಲ್ಲಿ ಸಹ ಇರುತ್ತಿತ್ತು. HOLY DAY (ಹೋಲಿಡೇ) ಕೊನೆಗೆ HOLIDAY (ಹಾಲಿಡೇ) ಯಾಗಿ ಬದಲಾಗಿಹೋಗಿ ಈದಿನ ರಜಾದಿನವನ್ನು ಹಾಲಿಡೇ ಎಂದು, ಸಂಡೇ ಈಜ್ ಹಾಲಿಡೇ ಅನ್ನುತ್ತಿದ್ದಾರೆ. ಪೂರ್ವದ ಸನ್‌ಡೇ ಈಜ್ ಹೋಲಿಡೇ ಅನ್ನುತ್ತಿದ್ದರು. ಪ್ರಪಂಚದಲ್ಲಿ ಯಾವ ಮತವಿಲ್ಲದ ಕಾಲದಲ್ಲಿಯೇ ಆದಿವಾರ ರಜಾದಿನವಾಗಿ ಇರುವುದು ಮೊದಲಾಗಿ ಈಗಲೂ ಆ ಸಂಪ್ರದಾಯ ಪ್ರಪಂಚವೆಲ್ಲಾ ಉಳಿದಿದೆ.

ಇಂದೂಗಳು ಆದಿವಾರವನ್ನು ಶುಚಿ, ಶುಭ್ರತೆಯಿಂದ ಹಬ್ಬದ ವಾತಾವರಣದಲ್ಲಿ ಕಳೆಯುತ್ತಿದ್ದರು. ಆ ದಿನವನ್ನು ಪವಿತ್ರವಾಗಿ ದೊಡ್ಡದಾಗಿ ನೋಡಿಕೊಳ್ಳುವುದರಿಂದ ದುರ್ವ್ಯಸನಗಳಾದ ಮತ್ತುಪಾನೀಯಗಳನ್ನು ಕುಡಿಯುವುದಾಗಲಿ, ಮಾಂಸವನ್ನು ತಿನ್ನುವುದಾಗಲಿ, ಕೆಟ್ಟದಾಗಿ ಮಾತನಾಡುವುದಾಗಲಿ, ಕೆಟ್ಟದಾಗಿ ಪ್ರವರ್ತಿಸುವುದಾಗಲಿ ಮಾಡುವವರು ಅಲ್ಲ. ವಾರದಲ್ಲಿನ ಏಳು ದಿನಗಳಲ್ಲಿ ಆರು ದಿನಗಳು ತಮಗಾಗಿ ವಿನಿಯೋಗಿಸಿ ಕೊಂಡರೂ ಆದಿವಾರ ಒಂದು ದಿನ ದೇವರಿಗೋಸ್ಕರ ಕೆಲಸ ಮಾಡಬೇಕೆಂದು ಕೊಳ್ಳುತ್ತಿದ್ದರು. ಇಂದೂಗಳನ್ನು ನೋಡಿ ಪ್ರಪಂಚ ದೇಶಗಳೆಲ್ಲವೂ ಆದಿವಾರವನ್ನು ಪವಿತ್ರವಾಗಿಯೇ ಕಳೆಯುತ್ತಿದ್ದರು. ಕಾಲ ಕಳೆದಂತೆಲ್ಲ ಜ್ಞಾನಿಗಳು ಅಜ್ಞಾನಿಗಳಾಗಿ ಬದಲಾಗುತ್ತಾ ಬಂದಿದ್ದಾರೆ. ರಾಜರು ಹೋದರೂ ಅವರ ಕೋಟೆಗಳು ಶೀಥಿಲಾವಸ್ಥೆಯಲ್ಲಿ ಉಳಿದಿರುವಂತೆ, ಇಂದೂ ಸಂಪ್ರದಾಯಗಳು ತಳಹತ್ತಿ

ಹೋದರೂ ಅವುಗಳಿಗೆ ಆಧಾರವಾಗಿ ಆದಿವಾರ ರಜಾದಿನವಾಗಿ ಉಳಿದು ಹೋಗಿದೆ. ಇಂದೂದೇಶದಲ್ಲಿ ಅಜ್ಞಾನ ಸ್ಥಳಮಾಡಿಕೊಂಡು ಇಂದೂತ್ವ ಪ್ರಶ್ನಾರ್ಥಕವಾಗಿದೆ. ಇಂದೂಗಳು ಪವಿತ್ರವಾಗಿ ಇಟ್ಟುಕೊಂಡಿರುವ ಮೊದಲ ದಿನವನ್ನು ಅಂದರೆ ಆದಿವಾರವನ್ನು, ವಾರದ ಕೊನೆಯ ದಿನವಾಗಿ ಇಟ್ಟುಕೊಂಡಿದ್ದಾರೆ. ಬಹಳಜನ ವಾರಾಂತ್ಯವಾದ ಆದಿವಾರ ಎಂದು ಹೇಳುತ್ತಿದ್ದಾರೆ. ಅದರೆ ವಿದೇಶಿಸಂಪ್ರದಾಯ ಕ್ಯಾಲೆಂಡರ್‌ಗಳಲ್ಲಿ ಸಹ ಆದಿವಾರ ಮೊದಲ ದಿನವಾಗಿ ಮೇಲೆಯೇ ಮುದ್ರಿಸುವುದು ಇಂದಿಗೂ ನಡೆಯುತ್ತಿದೆ. ಆದರೆ ಆಚರಣೆಯಲ್ಲಿ ಆದಿವಾರ ಪವಿತ್ರದಿನ ಅಲ್ಲದೆ ಭ್ರಷ್ಟುಹಿಡಿದ ದಿನವಾಗಿದೆಯೆಂದು ಹೇಳದೆ ತಪ್ಪುವುದಿಲ್ಲ. ಏಕೆಂದರೆ ಎಲ್ಲಾ ದುರಭ್ಯಾಸಗಳಿಗೆ ಆದಿವಾರ ನಿವಾಸವಾಗಿ ಬದಲಾಗಿಹೋಗಿದೆ. ಆದಿವಾರವನ್ನು ಪ್ರತ್ಯೇಕಿಸಿ ಮಾಂಸಭಕ್ಷಣ ದಿನವಾಗಿ ಇಟ್ಟುಕೊಳ್ಳುವುದು, ಮತ್ತುಪಾನೀಯಗಳು ಕುಡಿಯುವುದು, ಜೂಜವಾಡುವುದು ನಡೆಯುತ್ತಿದೆ. ರಜಾದಿನವಾದ್ದರಿಂದ ಎಲ್ಲಾ ವಿಲಾಸ ಕಾರ್ಯಗಳಿಗೆ ಆದಿವಾರ ನೆಲೆಯಾಗಿದೆ. ಆದಿವಾರ ರಜಾದಿನವಾಗಿ ಏಕೆ ಇದೆಯೆಂದು ಯೋಚಿಸದವರು ಅದನ್ನು ಅಜ್ಞಾನಕೆಲಸಗಳಿಗೆ ಉಪಯೋಗಿ ಸಿಕೊಳ್ಳುತ್ತಿದ್ದಾರೆ. ಆದಿವಾರವನ್ನು ಕೊನೆಯ ದಿನವಾಗಿ ಬಹಳಜನ ಅಂದುಕೊಳ್ಳುವುದು ನಡೆಯುತ್ತಿದೆ. ದೇವರ ಆರಾಧನೆಯಾಗಲಿ, ದೇವರ ಜ್ಞಾನವನ್ನು ಕುರಿತು ತಿಳಿದುಕೊಳ್ಳುವುದಾಗಲಿ ನಡೆಯುತ್ತಿಲ್ಲ. ಆದಿವಾರವು ಜೀವಿಗೆ ಸಂಬಂಧಿಸಿರುವುದೆಂದು, ಜೀವಿಯು ಹುಟ್ಟಿದ ದಿನವೆಂದು ಮರೆತು ಹೋಗಿದ್ದಾರೆ. ಆದಿವಾರಸ್ಥಾನದಲ್ಲಿ ಗುರುವಾರ, ಸೋಮವಾರ ಸ್ಥಾನದಲ್ಲಿ ಶುಕ್ರವಾರ, ಮಂಗಳವಾರ ಸ್ಥಾನದಲ್ಲಿ ಶನಿವಾರ ಸ್ಥಳಮಾಡಿಕೊಂಡಿವೆ. ಪೂರ್ವದಲ್ಲಿ ಆದಿ, ಸೋಮ, ಮಂಗಳವಾರಗಳು ಮುಖ್ಯವಾದವೆಂದು ಪವಿತ್ರವಾದವುಗಳಾದರೆ ಈಗಿನಕಾಲದಲ್ಲಿ ಗುರು, ಶುಕ್ರ, ಶನಿವಾರಗಳು ಪವಿತ್ರತೆಯನ್ನು ಸಂಪಾದಿಸಿಕೊಂಡಿವೆ. ಗುರು, ಶುಕ್ರ, ಶನಿವಾರಗಳಲ್ಲಿ ಮನುಷ್ಯರು ಶುಚಿ ಶುಭ್ರತೆಯನ್ನು ಪಾಟಿಸುತ್ತಾ ದೇವತೆಗಳ ಪೂಜೆಗಳು ಮಾಡುವುದು ನಡೆಯುತ್ತಿದೆ. ಈ ವಿಧವಾಗಿ ಆದಿವಾರ ಇಂದೂಗಳಲ್ಲಿ ಪ್ರಾಧಾನ್ಯತೆಯನ್ನು

ಕಳೆದುಕೊಂಡು ಬಹಳಕಾಲವಾಗಿದೆ. ಆದರೂ ಈಗ ಆದಿವಾರ ಒಂದರ ಪ್ರಾಧಾನ್ಯತೆಯನ್ನು ಆತ್ಮ ನಮಗೆ ಗುರುತು ಮಾಡುತ್ತಿದೆ.

ಕೋಟಿ ವರ್ಷಗಳಿಂದ ಇಂದೂಗಳಲ್ಲಿ ಪ್ರಾಧಾನ್ಯತೆ ಸಂಪಾದಿಸಿಕೊಂಡ ಆದಿವಾರ ಮಾಂಸಭಕ್ಷಣ ದಿನವಾಗಿ ಬದಲಾಗಿ ಹೋದರೆ, ಅರ್ಥದಿಂದ ಕೂಡಿಕೊಂಡ ಇಂದೂ ಎನ್ನುವ ಶಬ್ದವು ಅರ್ಥವಿಲ್ಲದ ಹಿಂದೂ ಶಬ್ದವಾಗಿ ಬದಲಾಗಿಹೋಗಿದೆ. ಇಂದೂ ಸಂಪ್ರದಾಯಗಳನ್ನು ತಿಳಿಯದ ಸ್ಥಿತಿಯಲ್ಲಿ ಹಿಂದೂಗಳು ನಿಂತುಹೋಗಿದ್ದಾರೆ. ಸಾಧಾರಣ ಮನುಷ್ಯರಿಗೆ ಅಲ್ಲದೆ ಸ್ವಾಮೀಜಿಗಳಿಗು ಸಹ ದೈವಧರ್ಮಗಳು, ಜ್ಞಾನಸಂಪ್ರದಾಯಗಳು ತಿಳಿಯದೆಹೋಗಿರುವುದರಿಂದ ಹಿಂದೂಗಳಲ್ಲಿ ಕೆಲವರು ಪರಮತಗಳ ವ್ಯಾಮೋಹವನ್ನು ಬೆಳೆಸಿಕೊಂಡು ಇಲ್ಲಿ ಇಲ್ಲದಿರುವುದೇನೊ ಅಲ್ಲಿ ಸಿಗುತ್ತದೆಂದು ಭ್ರಮೆಪಟ್ಟು ಮತಗಳು ಬದಲಾಗುತ್ತಿದ್ದಾರೆ. **ಪ್ರಪಂಚ ದೇಶಗಳಿಗೆಲ್ಲ ಆದರ್ಶವಾದ ಜ್ಞಾನವಿರುವ ಇಂದೂದೇಶದಲ್ಲಿಯೇ ಮತ್ತು ನೂರರಷ್ಟು ಜ್ಞಾನವನ್ನು ಬೋಧಿಸುವ ಭಗವದ್ಗೀತೆ ಹುಟ್ಟಿದ ಇಂದೂದೇಶದಲ್ಲಿಯೇ ಇಂದೂಮತವನ್ನು ಬಿಟ್ಟು ಇತರ ಮತಗಳನ್ನು ಕೆಲವರು ಸ್ವೀಕರಿಸುತ್ತಿದ್ದಾರೆ. ಇಂದೂಮತ ಗಣಿಯಂತಹದ್ದು. ಇತರ ಮತ ನಿಧಿಯಂತಹದ್ದು ಎಂದು ತಿಳಿಯದೆ ಬಹಳಜನ ಮತವನ್ನು ಬದಲಾಯಿಸಿಕೊಳ್ಳುತ್ತಿದ್ದಾರೆ. ಗಣಿಯಲ್ಲಿ ಸಿಕ್ಕಿರುವುದನ್ನು ತೆಗೆದುಕೊಂಡುಹೋಗಿ ಮತ್ತೊಂದು ಕಡೆ ಇಟ್ಟರೆ ಅದು ನಿಧಿ ಆಗುತ್ತದೆ. ಇಂದೂತ್ವ ಗಣಿಯಲ್ಲಿ ಹುಟ್ಟಿದ ಜ್ಞಾನವೆ ಇತರಕಡೆ ಇತರ ಮತ ನಿಧಿಗಳಂತೆ ಇವೆಯೆಂದು ತಿಳಿಯದವರು ಹಾಗೆ ಇತರಮತಗಳಿಗೆ ಅಲೆದಾಡುತ್ತಿದ್ದಾರೆ. ಗಣಿ ಅಗೆದಂತೆಲ್ಲ ಸಿಗುತ್ತದೆ, ನಿಧಿ ಅಗೆದ ಒಂದುದಿನ ಸಿಗುತ್ತದೆ. ಆದ್ದರಿಂದ ಗಣಿ ಶಾಶ್ವತ, ನಿಧಿ ಅಶಾಶ್ವತವೆಂದು ಹೇಳಬಹುದು. ಯಾರಿಗಾದರೂ ಅವನು ಹುಟ್ಟಿದ ಮತವೆ ಗಣಿಯಾಗಿ ಇರುತ್ತದೆ. ಪರಮತ ನಿಧಿಯಂತೇ ಇರುತ್ತದೆ. ಗಣಿಯಲ್ಲಿ ಇಲ್ಲದ್ದು ನಿಧಿಯಲ್ಲಿ ಸಿಗುವುದಿಲ್ಲ. ನಿಧಿಯಲ್ಲಿ ಸಿಕ್ಕಿರುವುದೇನೊ ಅದು ಗಣಿಯೊಳಗಿನದೆ. ಆದ್ದರಿಂದ ಮತಬದಲಾವಣೆ ಮಾಡಿಕೊಳ್ಳುವುದು ತಪ್ಪೆಂದು ನಾವು ಹೇಳದೆ ತಪ್ಪುವುದಿಲ್ಲ.**

ಕೋಟಿ ವರ್ಷಗಳ ಪೂರ್ವದಲ್ಲೆ ಆದಿವಾರ ತಯಾರಾಗಿದ್ದರೆ ನೂರಾರು ವರ್ಷಗಳ ಪೂರ್ವದಲ್ಲಿ ತಯಾರಾದ ಮತಗಳು ಸಹ ಆದಿವಾರವನ್ನು ಬದಲಾಯಿಸದೆ ಹೋಗಿವೆ. ಆದ್ದರಿಂದ ಆದಿವಾರ ಇತರದೇಶಗಳಲ್ಲಿ ಸಹ ಮುಖ್ಯದಿನವಾಗಿಯೇ ಇದೆ. ಪ್ರಪಂಚದಲ್ಲಿಯೇ ಮೊದಲ ದಿನವಾದ ಆದಿವಾರವನ್ನು ಗ್ರಹಗಳಲ್ಲಿ ಮೊದಲನೆಯದಾದ ಸೂರ್ಯನನ್ನು ಆಧಾರ ಮಾಡಿಕೊಂಡು, ಆತ್ಮಗಳಲ್ಲಿ ಮೊದಲನೆಯದಾದ ಜೀವಾತ್ಮಗೋಸ್ಕರ ಜ್ಯೋತಿಷ್ಯಶಾಸ್ತ್ರವನ್ನು ಇಂದೂಗಳು ತಯಾರುಮಾಡಿದ್ದಾರೆ. ಷಟ್ ಶಾಸ್ತ್ರಗಳಲ್ಲಿ ಒಂದಾದ ಜ್ಯೋತಿಷ್ಯಶಾಸ್ತ್ರ ಆದಿವಾರವೇ ಮಾನವನ ಮೆದುಳಿನಲ್ಲಿ ತಯಾರಾಗಿದೆ. ಆದಿವಾರ ಹುಟ್ಟಿದ ಜೀವಿಗೆ ಆದಿವಾರ ಹುಟ್ಟಿದ ಜ್ಯೋತಿಷ್ಯ ಕರ್ಮವನ್ನು ತಿಳಿಸುತ್ತಿದೆ. ಈ ವಿಧವಾಗಿ ಎಷ್ಟೋ ವಿಧಗಳ ಆದಿವಾರ ಮುಖ್ಯದಿನವಾಗಿ ಗುರುತು ಹೊಂದಿದೆ. ಪ್ರಪಂಚದಲ್ಲಿ ಉತ್ತರ, ದಕ್ಷಿಣ ದಿಶಗಳಲ್ಲಿ ವ್ಯಾಪಿಸಿರುವ ಅಯಸ್ಕಾಂತಶಕ್ತಿ ಪ್ರತ್ಯೇಕಿಸಿ ಆದಿವಾರದಲ್ಲಿ ಮಾನವನ ಮೇಲೆ ಹೆಚ್ಚಿನ ಪ್ರಭಾವವನ್ನು ತೋರಿಸುತ್ತಿದೆ. ಒಬ್ಬ ಮಾನವನ ಮೇಲೆಯೆ ಅಲ್ಲದೆ ಪಂಚಭೂತಗಳ ಮೇಲೆಯೂ ಸಹ ಪ್ರಭಾವವನ್ನು ತೋರಿಸುತ್ತದೆ. ಆದಿವಾರ ಅಮಾವಾಸ್ಯ ದಿನವಾದರೂ, ಪೌರ್ಣಮಿ ದಿನವಾದರೂ ಮತ್ತಷ್ಟು ಹೆಚ್ಚಾಗಿ ಪ್ರಭಾವವಿರುವುದು ವಾಸ್ತವ. ಆದಿವಾರ ಅಭೌತಿಕವಾದ ಸೂಕ್ಷ್ಮಗಳಿಗೆ ಶಕ್ತಿವಂತ ದಿನವಾಗಿ ಇದೆಯೆಂದು ಪೂರ್ವದಲ್ಲಿ ಎಲ್ಲರಿಗೂ ತಿಳಿದಿತ್ತು. ಹೀಗೆ ಸ್ಥೂಲವಾಗಿ ಸೂಕ್ಷ್ಮವಾಗಿ ಆದಿವಾರ ಎಲ್ಲಾ ವಿಧಗಳ ಪ್ರಾಮುಖ್ಯತೆ ಹೊಂದಿದೆ ಎಂದು ತಿಳಿಯಬೇಕು.

# ಸೋಮವಾರ

ಒಂದು ದೇಶದಲ್ಲಿ ಒಂದು ಪ್ರಭುತ್ವವಿರುತ್ತದೆ. ಪ್ರಭು ಅಂದರೆ ರಾಜ ಎಂದು ಅರ್ಥ. ಪ್ರಭುವಿನಿಂದ ಪಾಲಿಸಲ್ಪಡುವುದು ಆದ್ದರಿಂದ ಅದನ್ನು ಪ್ರಭುತ್ವ ಅನ್ನುತ್ತೇವೆ. ಹೊರಗಿನ ದೇಶದಲ್ಲಿ ಪ್ರಭುವೂ ಪ್ರಭುತ್ವವೂ ಇದ್ದಂತೆ, ಒಳಗಿನ

ದೇಹದಲ್ಲಿ ಸಹ ಒಬ್ಬ ದೇವರೂ ದೈವತ್ವವೂ ಇದೆ. ದೇಶದಲ್ಲಿನ ಪ್ರಭುತ್ವಕ್ಕೆ ಕಾನೂನು ಇರುತ್ತದೆ. ಹಾಗೆಯೇ ದೇಹದಲ್ಲಿನ ದೈವತ್ವಕ್ಕೆ ಧರ್ಮವಿರುತ್ತದೆ. ದೇಶದಲ್ಲಿನ ಕಾನೂನನ್ನು ತಿಳಿಸುವುದು ನ್ಯಾಯ. ಹಾಗೆಯೇ ದೇಹದಲ್ಲಿನ ಧರ್ಮವನ್ನು ತಿಳಿಸುವುದು ಜ್ಞಾನ. ಕಾನೂನು ತಿಳಿಯಬೇಕೆಂದರೆ ನ್ಯಾಯಶಾಸ್ತ್ರವನ್ನು ಓದಬೇಕು. ಹಾಗೆಯೇ ಧರ್ಮವನ್ನು ತಿಳಿಯಬೇಕೆಂದರೆ ಜ್ಞಾನ ಇರುವ ಯೋಗಶಾಸ್ತ್ರವನ್ನು ಓದಬೇಕು. ನ್ಯಾಯಶಾಸ್ತ್ರ ಯಲ್.ಯಲ್.ಬಿ ಪುಸ್ತಕಗಳಲ್ಲಿ ಇದೆ, ಅದನ್ನು ಬೋಧಿಸುವುದಕ್ಕೆ ಪ್ರೋಫೆಸರ್ಸ್ ಇದ್ದಾರೆ, ಅದೇ ರೀತಿ ಜ್ಞಾನವಿರುವ ಯೋಗಶಾಸ್ತ್ರ ಭಗವದ್ಗೀತೆ ರೂಪದಲ್ಲಿದೆ, ಅದನ್ನು ಬೋಧಿಸುವುದಕ್ಕೆ ಸ್ವಾಮೀಜಿಗಳು (ಯೋಗಿಗಳು) ಇದ್ದಾರೆ. ದೇಶದಲ್ಲಿನ ನ್ಯಾಯಕ್ಕೆ ಅಧಿಪತಿಯಾಗಿ ನ್ಯಾಯಶಾಖ ಮಂತ್ರಿ ಇರುತ್ತಾನೆ. ಹಾಗೆಯೇ ದೇಹದಲ್ಲಿನ ಜ್ಞಾನಕ್ಕೆ ಅಧಿಪತಿಯಾಗಿ ಚಂದ್ರನು ಇದ್ದಾನೆ. ಈ ವಿಷಯವನ್ನೇ ಕೆಳಗೆ ವಿವರವಾಗಿ ನೋಡಿರಿ.

| ಹೊರಗಿನದೇಶದಲ್ಲಿ – | ಒಳಗಿನ ದೇಹದಲ್ಲಿ |
|---|---|
| ದೇಶ | ದೇಹ |
| ಪ್ರಭುತ್ವ | ದೈವತ್ವ |
| ಪ್ರಭು | ಪರಮಾತ್ಮ |
| ಕಾನೂನು | ಧರ್ಮ |
| ನ್ಯಾಯ | ಜ್ಞಾನ |
| ನ್ಯಾಯಶಾಸ್ತ್ರ | ಯೋಗಶಾಸ್ತ್ರ |
| ಎಲ್.ಎಲ್.ಬಿ | ಭಗವದ್ಗೀತೆ |
| ಪ್ರೋಫೆಸರ್ಸ್ | ಸ್ವಾಮೀಜಿಗಳು (ಯೋಗಿಗಳು) |
| ಮಂತ್ರಿ | ಚಂದ್ರನು (ಇಂದೂ) |

ಹೊರಗಿನ ದೇಶಗಳೂ ಕಾನೂನುಗಳೂ ಬದಲಾಗಬಹುದು, ಪ್ರಭುಗಳೂ ಪ್ರಭುತ್ವಗಳೂ ಬದಲಾಗಬಹುದು, ಆದರೆ ಒಳಗಿನ ದೇಹಗಳಾಗಲಿ, ಧರ್ಮವಾಗಲಿ, ದೇವರಾಗಲಿ, ದೈವತ್ವವಾಗಲಿ ಎಂದಿಗೂ ಬದಲಾಗುವುದಿಲ್ಲ. ಆದ್ದರಿಂದ ಹೊರಗಿನದೆಲ್ಲಾ ಅಶಾಶ್ವಿತವೆಂದು ಒಳಗಿನದೆಲ್ಲಾ ಶಾಶ್ವಿತವೆಂದು ನಮ್ಮ ಹಿರಿಯರು ಹೇಳುತ್ತಾಬಂದಿದ್ದಾರೆ. ಹೊರಗಿನ ಪ್ರಭುಗಳು ಪ್ರಭುತ್ವಗಳು ಅಶಾಶ್ವತವಾದವೆಂದು ಒಳಗಿನ ದೇವರು ದೈವತ್ವ ಶಾಶ್ವತವೆಂದು ಎಲ್ಲರೂ ಜ್ಞಾಪಕ ಇಟ್ಟುಕೊಳ್ಳಬೇಕು. ಶಾಶ್ವತವಾದ ದೇವರಿಗೋಸ್ಕರ ಆತನ ಧರ್ಮವನ್ನೂ, ಆತನ ಧರ್ಮಕ್ಕೋಸ್ಕರ ಜ್ಞಾನವನ್ನು ತಿಳಿಯಬೇಕು. ಜ್ಞಾನಕ್ಕೆ ಅಧಿಪತಿ ಚಂದ್ರನೆಂದು ಹೇಳಿಕೊಂಡಿದ್ದೇವೆ. ಚಂದ್ರನನ್ನೇ ಇಂದೂವೆಂದು, ಸೋಮನೆಂದು ಅನ್ನುತ್ತಿದ್ದೇವೆ. ಮೊದಲ ದಿನವಾದ ಆದಿವಾರ ಸೃಷ್ಠಿ ನಡೆದ ನಂತರ ಎರಡನೆದಿನ ಜ್ಞಾನ ತಿಳಿದಿದೆ. ಆದ್ದರಿಂದ ಎರಡನೆಯ ದಿನಕ್ಕೆ ಜ್ಞಾನಾಧಿಪತಿಯಾದ ಚಂದ್ರನ ಹೆಸರನ್ನಿಡುತ್ತಾ ಆ ದಿನವನ್ನು ಇಂದೂ ವಾರವೆಂದು, ಸೋಮವಾರವೆಂದು ಕರೆಯುತ್ತಿದ್ದೇವೆ. ಈ ವಿಧವಾಗಿ ಸೃಷ್ಠಿ ನಂತರ ಎರಡನೆಯ ದಿನವನ್ನು ಜ್ಞಾನ ದಿನವಾಗಿ ಪರಿಗಣಿಸಬೇಕಾಗಿ ಬಂದಿದೆ.

ಪ್ರತಿ ಮನುಷ್ಯನಿಗು ಜ್ಞಾನ ತಿಳಿಯಬೇಕಾಗಿರುವುದು ತಲೆಗೆ. ಮನುಷ್ಯನ ತಲೆಗೆ ಒಂದೇಸಲ ಜ್ಞಾನವೆಲ್ಲಾ ತಿಳಿಯದು. ಮೊದಲು ಸ್ವಲ್ಪ ಜ್ಞಾನವನ್ನು ತಿಳಿದುಕೊಂಡವನು ಜ್ಞಾನವನ್ನು ದಿನದಿನಾಭಿವೃದ್ಧಿ ಮಾಡಿಕೊಳ್ಳುತ್ತಾ ಕಡೆಗೆ ಸಂಪೂರ್ಣವಾಗಿ ತಿಳಿಯಬೇಕು. ಜ್ಞಾನ ಸಮುದ್ರದಂತಹದ್ದು. ಇಷ್ಟು ದಿನಗಳಲ್ಲಿ ತಿಳಿದುಕೊಳ್ಳುತ್ತೇವೆಂದು ಯಾರೂ ಹೇಳಲಾರರು. ಎಷ್ಟೋ ಕಾಲ ಜ್ಞಾನವನ್ನು ಅಭಿವೃದ್ಧಿ ಮಾಡಿಕೊಳ್ಳುತ್ತಲೇ ಇರಬೇಕು. ಆದ್ದರಿಂದ ಜ್ಞಾನವನ್ನು ಅಭಿವೃದ್ಧಿ ಯಾಗುತ್ತಿರುವ ಅರ್ಧ ಚಂದ್ರಾಕಾರಕ್ಕೆ ಸಮಾನವಾಗಿ ಹೋಲಿಸಿದ್ದಾರೆ. ಸಂಪೂರ್ಣ ಜ್ಞಾನಿಯನ್ನು ಪೂರ್ಣ ಚಂದ್ರನೊಂದಿಗೆ ಸಮಾನವಾಗಿ ಹೋಲಿಸುವುದಾಗಿದೆ. ಮನುಷ್ಯ ಜ್ಞಾನವನ್ನು ತನ್ನ ತಲೆಯಲ್ಲಿ ವೃದ್ಧಿ ಮಾಡಿಕೊಳ್ಳಬೇಕಾಗಿದೆ, ಆದ ಕಾರಣ ಮಾನವಾಕಾರದಲ್ಲಿರುವ ಶಂಕರನು

ಸಹ ತನ್ನ ತಲೆಮೇಲೆ ಅಭಿವೃದ್ಧಿಯಾಗುತ್ತಿರುವ ಜ್ಞಾನಕ್ಕೆ ಚಿಹ್ನೆಯಾಗಿ ಚಂದ್ರಾಕಾರವನ್ನು ಧರಿಸಿ ತೋರಿಸಿದ್ದಾನೆ. ಈ ವಿಧವಾಗಿ ಚಂದ್ರನು ಜ್ಞಾನಕ್ಕೆ ಗುರುತಾಗಿ ಇದ್ದಾನೆ. ಜ್ಯೋತಿಷ್ಯಶಾಸ್ತ್ರದಲ್ಲಿ ಸಹ ಚಂದ್ರಗ್ರಹವನ್ನು ಜ್ಞಾನ ಚಿಹ್ನೆಯಾಗಿಯೇ ಇಟ್ಟಿದ್ದಾರೆ. ಇದೇ ಆಧಾರದಿಂದ ಜ್ಞಾನವಿರುವ ದೇಶವನ್ನು ಇಂದೂದೇಶ ಅಂದಿದ್ದಾರೆ. ಸೃಷ್ಠಿ ಆದಿಯಲ್ಲಿ ಎರಡನೆಯ ದಿನ ಮನುಷ್ಯನಿಗೆ ಜ್ಞಾನ ತಿಳಿದಿದೆ, ಆದ್ದರಿಂದ ಆ ಎರಡನೆಯ ದಿನವನ್ನು ಇಂದೂವಾರ ಇಲ್ಲವೆ ಸೋಮವಾರ ಅನ್ನುತ್ತಿದ್ದೇವೆ. ಇಂದೂ ದೇಶದಲ್ಲಿ ಇಂದೂವಾರ ಇಂದೂಗಳಿಗೆ ಜ್ಞಾನದ ಪ್ರಕಾರ ಎಷ್ಟೋ ಮುಖ್ಯವಾದುದು. ಆದ್ದರಿಂದ ಇಂದೂವಾರವಾದ ಸೋಮವಾರವನ್ನು ಪೂರ್ವದಿಂದ ಜ್ಞಾನವೃದ್ಧಿ ದಿನವಾಗಿ ಪರಿಗಣಿಸುತ್ತಿದ್ದರು. ಕಾಲಕ್ರಮವಾಗಿ ಜ್ಞಾನ ತಿಳಿಯದವರ ಮಧ್ಯದಲ್ಲಿ ಸೋಮವಾರ ಜ್ಞಾನಕ್ಕೆ ಗುರುತೆಂದು ಸಹ ತಿಳಿಯದ ಹಾಗೆ ಹೋಗಿದೆ.

ಇಂದೂ ದೇಶವಾದ ಭಾರತದೇಶದಲ್ಲಿಯೇ ಇಂದೂತ್ವ (ಜ್ಞಾನ) ತಿಳಿಯದ ಇಂದೂಗಳು ಕೊನೆಗೆ ನಾವು ಪೂರ್ವದಿಂದ ಇಂದೂಗಳೆಂದು ಹೆಸರುವಾಸಿಯಾಗಿದ್ದೇವೆಂದು ತಿಳಿಯದೆ ಕೊನೆಗೆ ಮೂನ್‌ಡೇ, ಮನ್‌ಡೇ ಆದಂತೆ ಇಂದೂಗಳು ಹಿಂದೂಗಳಂತೆ ಹೇಳಿಕೊಳ್ಳುತ್ತಿದ್ದಾರೆ. ಜ್ಯೋತಿಷ್ಯಶಾಸ್ತ್ರದಲ್ಲಿ ಜಾಪತಕ ಎನ್ನುವ ಪದದಲ್ಲಿ ಜಾ ಪಕ್ಕದಲ್ಲಿರುವ "ಪ" ಅನ್ನುವ ಅಕ್ಷರಹೋಗಿ ಜಾತಕ ಆದಂತೆ ಇತರ ದೇಶಗಳಲ್ಲಿ ಇಂಗ್ಲಿಷ್ ಭಾಷೆಯಲ್ಲಿ ಎರಡನೆಯ ದಿನವಾದ ಚಂದ್ರನ ದಿನವನ್ನು ಪೂರ್ವದಿಂದ MOON DAY (ಮೂನ್‌ಡೇ) ಎಂದು ಕರೆಯುವವರು ಯಮ್ ಪಕ್ಕದಲ್ಲಿರುವ ಎರಡು ಸೊನ್ನೆಗಳಲ್ಲಿ ಒಂದು ಸೊನ್ನೆಯನ್ನು ಮರೆತುಹೋಗಿ MONDAY (ಮನ್‌ಡೇ) ಎಂದು ಕರೆಯುತ್ತಿದ್ದಾರೆ. ಇತರ ದೇಶಗಳಲ್ಲಿ ಒಂದು ಸೊನ್ನೆಯನ್ನು ಮರೆತುಹೋದರೆ ಭಾರತದೇಶದಲ್ಲಿ ನೇರವಾಗಿ ಒಂದು ಅಕ್ಷರ ಸ್ವರೂಪವನ್ನೇ ಬದಲಾಯಿಸಿ "ಇ" ನನ್ನು "ಹಿ" ಆಗಿ ಮಾಡಿ ಇಂದೂ ದೇಶವನ್ನು ಹಿಂದೂದೇಶ ಅನ್ನುತ್ತಿದ್ದಾರೆ. ಪೂರ್ವದಲ್ಲಿ ನಾವು ಜ್ಞಾನವಿರುವ ಇಂದೂಗಳೆಂದು ಹೇಳಿದರೂ ಕೇಳದ ಹಿಂದೂಗಳು ಈ

ದಿನ ದೈವಭಕ್ತರು ಅಲ್ಲದೆ ದೇಶಭಕ್ತರಾಗಿದ್ದೂ ಸತ್ಯವನ್ನು ಹೇಳಿದ ನಮ್ಮಂತ ಹವರನ್ನು ಸಹ ಲೆಕ್ಕಮಾಡದಂತಿದ್ದಾರೆ.

ಜ್ಞಾನದಲ್ಲಿ ಎಲ್ಲಾ ದೇಶಗಳಿಗಿಂತ ಶ್ರೇಷ್ಠವಾಗಿದ್ದು ಇತರ ದೇಶಗಳಿಂದ ಇಂದೂದೇಶವೆಂದು ಕರೆಯಿಸಿಕೊಂಡ ಈ ದೇಶಕ್ಕೆ ಪೂರ್ವವೈಭವ ಬರಬೇ ಕೆಂದರೆ ನಾವೆಲ್ಲರೂ ಜ್ಞಾನವನ್ನು ತಿಳಿದ ಇಂದೂಗಳಾಗಿ ಬದಲಾಗಬೇಕು. ಹಾಗೆ ಬದಲಾಗಬೇಕೆಂದರೆ ಜ್ಞಾನಕ್ಕೆ ಪ್ರತೀಕವಾಗಿರುವ ಸೋಮವಾರವನ್ನು ಕುರಿತು ತಿಳಿದುಕೊಳ್ಳಬೇಕು. ಮೊದಲ ದಿನ ಸೃಷ್ಠಿ ಆದಿಗೆ ಚಿಹ್ನೆಯಾದರೆ, ಎರಡನೆಯದಿನ ದೈವಧರ್ಮವನ್ನು ತಿಳಿಸುವ ಜ್ಞಾನಕ್ಕೆ ಗುರುತೆಂದು ತಿಳಿಯಬೇಕು. ಜೀವನದಲ್ಲಿ ಮೂರು ದಿನಗಳೇ ಮುಖ್ಯವಾದವು. ಒಂದು ಹುಟ್ಟುವುದು, ಎರಡು ಬದುಕುವುದು, ಮೂರು ಸಾಯುವುದು. ಈ ಮೂರು ದಿನಗಳಿಗೆ ಗುರುತಾಗಿ ಬ್ರಹ್ಮ, ವಿಷ್ಣು, ಮಹೇಶ್ವರರನ್ನು ಹೇಳಿದ್ದಾರೆ. ಜ್ಞಾನಕ್ಕೆ ಅಧಿಪತಿ ಚಂದ್ರನಾದಂತೆ, ಹುಟ್ಟುವಿಕೆಗೆ ಬ್ರಹ್ಮ, ಬದುಕುವುದಕ್ಕೆ ವಿಷ್ಣು, ಸಾವಿಗೆ ಹರನು ಅಧಿಪತಿಗಳೆಂದು ಹೇಳಿದ್ದಾರೆ. ಮುಖ್ಯವಾದ ಮೂರು ದಿನಗಳು ವಾರದಲ್ಲಿ ಮೊದಲೆ ಇವೆ. ಅದರಲ್ಲಿ ಎರಡನೆಯದು ಇಂದೂವಾರ (ಸೋಮವಾರ) ಕಾಲಗಮನದಲ್ಲಿ ಆದಿವಾರದಂದು ಬರುವ ಅಮಾವಾಸ್ಯ ಎಷ್ಟು ಮುಖ್ಯ ವಾದುದೊ ಹಾಗೆಯೇ ಸೋಮವಾರದಂದು ಬರುವ ಪೌರ್ಣಮಿ ಸಹ ಅಷ್ಟೇ ಮುಖ್ಯವಾದುದು. ಆದಿವಾರದಂದು ಬರುವ ಅಮಾವಾಸ್ಯ ಶಕ್ತಿವಂತವಾದಂತೆ, ಸೋಮವಾರ ಬರುವ ಪೌರ್ಣಮಿ ಸಹ ಶಕ್ತಿವಂತವಾದುದೇ!

# ಮಂಗಳವಾರ

ಮಂಗಳ ಅಂದರೆ ಶುಭಕರವೆಂದು ಅರ್ಥ. ಪ್ರಪಂಚದಲ್ಲಿ ಎಲ್ಲದಕ್ಕಿಂತ ಶುಭವಾದುದು ಯಾವುದು ಎಂದು ಪ್ರಶ್ನಿಸಿಕೊಂಡು ನೋಡಿದರೆ ಎಲ್ಲದಕ್ಕಿಂತ ಮೀರಿ ಅತ್ಯಂತ ಶುಭಕರವಾದುದು ದೈವವು ಒಂದೇ. ದೈವವನ್ನು ಕಾಲ

ಎಂದು ಸಹ ಅನ್ನುತ್ತೇವೆ. ಕಾಲ ಎಂದರೆ ನಾಶವೆಂದು ಸಹ ಅರ್ಥವಿದೆ. ಇದರ ಪ್ರಕಾರ ಕೊನೆಗೆ ಮಂಗಳ ಅಂದರೆ ನಾಶವೆಂದು ಸಹ ಹೇಳಿಕೊಳ್ಳಬಹುದು. ಆಧ್ಯಾತ್ಮಿಕ ರೀತಿ ಹಾಗೆ ಹೇಳಿಕೊಳ್ಳಬೇಕಾಗಿದೆ. ಮಂಗಳವಾರ ಅಂದರೆ ನಾಶದ ದಿನ ಎಂದು ಅರ್ಥ. **ಆದಿವಾರ ಸೃಷ್ಠಿಗೆ, ಸೋಮವಾರ ಸ್ಥಿತಿಗೆ, ಮಂಗಳವಾರ ಲಯಕ್ಕೆ ಗುರುತಾಗಿ** ಪೂರ್ವದಿಂದ ಹಿರಿಯರು ಹೇಳುತ್ತಲೆ ಇದ್ದಾರೆ. ಇಲ್ಲಿ ಸ್ವಲ್ಪ ಅನುಮಾನ ಬಂದು **"**ಸೃಷ್ಟಿ, ಸ್ಥಿತಿ, ಲಯ ಅನ್ನುವ ಮೂರೂ, ಮೂರು ದಿನಗಳಿಗೆ ಗುರುತಾದರೆ, ಲಯ (ನಾಶಕ್ಕೆ) ಸಂಬಂಧಿಸಿದ ದಿನವನ್ನು ಶುಭಕರವಾದುದಾಗಿ ಮಂಗಳವಾರವೆಂದು ಹೆಸರು ಇಟ್ಟಿದ್ದಾರಲ್ಲವೆ, ನಾಶ ಯಾರಿಗಾದರೂ ದುಃಖದಿಂದ  ಕೂಡಿಕೊಂಡಿರುತ್ತದೆ, ಆದರೆ ಶುಭದಿಂದ ಕೂಡಿಕೊಂಡಿರುತ್ತದಾ?**"** ಎಂದು ಕೆಲವರು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಸಮಾಧಾನ ಏನೆಂದರೆ! ನಾಶವೊಂದರ ನಿಜಸ್ಥಿತಿಯನ್ನು ತಿಳಿಯದೆ ಗುಣ ಪ್ರಭಾವದಿಂದ ಬಹಳಜನ ದುಃಖಪಡುತ್ತಿರಬಹುದು. ಆದರೆ ನಾಶಕ್ಕೆ ಅರ್ಥವನ್ನು ತಿಳಿದರೆ ಯಾರೂ ದುಃಖಪಡುವುದಿಲ್ಲ. ಉದಾಹರಣೆಗೆ ಒಬ್ಬನು ಮರಣಿಸಿದರೆ ಆತನು ನಿನಗೆ ಹತ್ತಿರ ಸಂಬಂಧಿಕನಾದ್ದರಿಂದ ನೀನು ದುಃಖಪಡಬಹುದು. ಮರಣಿಸಿದವನು ನಾಶವಾಗಲಿಲ್ಲ, ಅವನು ಕೇವಲ ರೂಪಾಂತರ ಹೊಂದಿದ್ದಾನೆ. ವಾಸ್ತವಕ್ಕೆ ಅವನು ನಾಶವಾಗಲಿಲ್ಲ. ಅಂತಹವನನ್ನು ಕುರಿತು ದುಃಖಪಡುವುದನ್ನು ನೋಡಿದರೆ ಆ ದುಃಖ ನಾಶವನ್ನು ಕುರಿತು ಅಲ್ಲ, ಮರಣವನ್ನು ಕುರಿತು ಮಾತ್ರವೆ. ಈ ವಿಧವಾಗಿ ನೋಡಿದರೆ ನಿಜಕ್ಕೆ ಯಾರೂ ಸಹ ನಾಶಕ್ಕೆ ದುಃಖಪಡುತ್ತಿಲ್ಲ. ಆಕಾರ ಬದಲಾವಣೆಗೆ ದುಃಖಪಡುತ್ತಿದ್ದಾನೆ. ಜೀವವಿರುವ ವಾಗಲಿ, ಜೀವವಿಲ್ಲದವಾಗಲಿ ಬದಲಾವಣೆ ಹೊಂದಿದಾಗ ಆ ಬದಲಾವಣೆ ಯನ್ನು ನಾಶ ಅಂದುಕೊಳ್ಳಬಾರದು. ಪ್ರಪಂಚದಲ್ಲಿ ಏನಾದರೂ, ಯಾರಾದರೂ ಬದಲಾವಣೆ ಆಗುತ್ತಿದ್ದಾರೆ ಆದರೆ ನಾಶವಾಗುತ್ತಿಲ್ಲ. ಬದಲಾವಣೆ ಯಾವಾಗಲೂ ನಡೆಯುತ್ತಾ ಇರುತ್ತದೆ. ನಾಶ ಬಹು ಅಪರೂಪವಾಗಿ ನಡೆಯುತ್ತದೆ. ನಾಶ ಕೇವಲ ಜೀವರಾಶಿಗಳಿಗೆ ಸಂಬಂಧಿಸಿರುವುದೇ ಹೊರತು ಜೀವ ಇಲ್ಲದವುಗಳಿಗೆ

ಸಂಬಂಧಿಸಿರುವುದು ಅಲ್ಲ. ಒಬ್ಬ ಜೀವಿಯು ಎಂದಿಗಾದರೂ ನಾಶವಾಗಬಹುದು, ಆದರೆ ಒಂದು ವಸ್ತುವು ಎಂದಿಗೂ ನಾಶ ಆಗುವುದಿಲ್ಲ.

ಮುಖ್ಯವಾದ ಸಮಸ್ಯ ಏನೆಂದರೆ ನಾಶ ಯಾವುದು ಎನ್ನುವ ವಿಷಯ, ಬಹಳಜನ ಮೇಧಾವಿಗಳಿಗು ಸಹ ತಿಳಿಯದು. ಬದಲಾವಣೆಯನ್ನು ಇಲ್ಲವೆ ಮರಣವನ್ನು ನಾಶ ಎಂದು ಸರ್ವಸಾಧಾರಣವಾಗಿ ಎಲ್ಲರೂ ಅಂದುಕೊಳ್ಳುತ್ತಿದ್ದೇವೆ. ಆದರೆ ಅದು ಕೇವಲ ಒಂದು ಬದಲಾವಣೆಯೇ ಆಗಲಿ ನಾಶ ಅಲ್ಲವೆಂದು ಗುರುತಿಸಲಾರದೆ ಹೋಗುತ್ತಿದ್ದೇವೆ. ಉದಾಹರಣೆಗೆ ಒಂದು ಕಟ್ಟಿಗೆ ಸುಟ್ಟು ಇದ್ದಿಲಾಗಬಹುದು, ಬೂದಿಯಾಗಬಹುದು. ಅಷ್ಟುಮಾತ್ರಕ್ಕೆ ಅದನ್ನು ಕಟ್ಟಿಗೆಯೆ ನಾಶವಾಗಿದೆ ಎನ್ನಬಾರದು. ಕಟ್ಟಿಗೆ ಇದ್ದಿಲಾಗಿ ಬದಲಾವಣೆ ಆಗಿದೆಯೆಂದು ಅನ್ನಬಹುದು. ಬೂದಿಯಾದರೆ ಬೂದಿಯಾಗಿ ಬದಲಾವಣೆ ಆಗಿದೆಯೆಂದು ಹೇಳಬಹುದು. ಜಾಲಿ ಕಟ್ಟಿಗೆಯನ್ನು ಸುಟ್ಟು ಬೂದಿ ಮಾಡಿದರೆ ಅದನ್ನು ಜಾಲಿ ಕಟ್ಟಿಗೆಯ ಬೂದಿ ಎನ್ನುತ್ತೇವೆ. ಏಕೆಂದರೆ ಜಾಲಿ ಕಟ್ಟಿಗೆಯ ಬೂದಿಯಲ್ಲಿ ಕೆಲವು ಪ್ರತ್ಯೇಕತೆಗಳು ಇರುತ್ತವೆ. ಜಾಲಿ ಕಟ್ಟಿಗೆ ಎಂತಹ ಸ್ಥಿತಿಯಲ್ಲಿಯೂ ಇಲ್ಲದಹಾಗೆ ಹೋದಾಗ ಅದು ನಾಶವಾಗಿದೆ ಅನ್ನಬಹುದು. ಹಾಗೆ ಯಾವ ವಸ್ತುವು ನಾಶವಾಗುವುದಿಲ್ಲ. ಕೇವಲ ಶರೀರವನ್ನು ಧರಿಸಿದ ಜೀವಿಯು ಮಾತ್ರ ನಾಶ ಆಗುತ್ತಾನೆ. ಜೀವಿಯು ನಾಶಕ್ಕಾಗಿ ಯೋಗದಿಂದ ಎಷ್ಟೋ ಶ್ರಮಿಸಿದರೆ ಹೊರತು, ಎಷ್ಟೋ ಆರಾಟಪಟ್ಟರಾಗಲಿ ಅಪರೂಪವಾಗಿ ನಾಶವಾಗುವುದಕ್ಕೆ ಅವಕಾಶವಿದೆ. ಜೀವಿಯು ಕೋರಿಕೊಂಡರೇನೆ ಎಷ್ಟೋ ಕಾಲಕ್ಕೆ ಅಪರೂಪವಾಗಿ ಲಭಿಸುವ ನಾಶವನ್ನು ಕುರಿತು ಯೋಚಿಸಿದರೆ ಅದು ಎಷ್ಟೋ ದೊಡ್ಡದು, ಪವಿತ್ರವಾದುದು, ಶುಭಕರವಾದುದೆಂದು ತಿಳಿಯುತ್ತಿದೆ. ಆದ್ದರಿಂದ ನಾಶವೆಂದರೆ ಕಾಲ, ಕಾಲವೆಂದರೆ ದೈವ, ದೈವವೆಂದರೆ ಶುಭ ಇಲ್ಲವೆ ಮಂಗಳವೆಂದು ಹೇಳಬಹುದು. ಜೀವಿಯು ನಾಶವಾಗುವ ದಿನಕ್ಕೆ ಮಂಗಳವಾರವೆಂದು ಹೆಸರು ಇಟ್ಟಿದ್ದೇವೆ.

ಆಧ್ಯಾತ್ಮಿಕ ಜ್ಞಾನ ತಿಳಿದವರಿಗೆ ಮಾತ್ರವೆ ಆದಿ, ಸೋಮ, ಮಂಗಳ ವಾರಗಳ ವಿಶಿಷ್ಟತೆ ತಿಳಿಯುತ್ತದೆ. ಕುರುಡನಿಗೆ ರತ್ನಕೊಟ್ಟರೂ ಅದನ್ನು ಕೇವಲ ಸಾಧಾರಣ ಕಲ್ಲಾಗಿ ಲೆಕ್ಕಿಸಿಕೊಂಡಂತೆ ಆತ್ಮಜ್ಞಾನ ಇಲ್ಲದವನಿಗೆ ಆದಿ, ಸೋಮ, ಮಂಗಳವಾರಗಳು ಕೇವಲ ಸಾಧಾರಣ ದಿನಗಳಾಗಿ ಕಾಣಿಸುತ್ತಿವೆ. ಜ್ಞಾನದ ಪ್ರಕಾರ ಆದಿ, ಸೋಮವಾರಗಳನ್ನು ಕುರಿತು ಮೊದಲೆ ಹೇಳಿಕೊಂಡಿದ್ದೇವೆ. ಈಗ ಮಂಗಳವಾರವನ್ನು ಕುರಿತು ವಿವರವಾಗಿ ಹೇಳಿಕೊಳ್ಳೋಣ. ಸೂರ್ಯ ಕುಟುಂಬದಲ್ಲಿನ ಗ್ರಹಗಳು ಒಂಭತ್ತೆಂದು ಬಹಳಜನ ಹೇಳಿಕೊಳ್ಳುತ್ತಿದ್ದರು. ಆ ಮಾತು ತಪ್ಪೆಂದು, ಸುಲಭವಾಗಿ ಹೇಳಬಹುದು. ಅದು ಹೇಗೆ ಅಂದರೆ! ಇಲ್ಲಿ ಒಂದು ಚಿಕ್ಕ ಉದಾಹರಣೆಯನ್ನು ಹೇಳಿಕೊಳ್ಳೋಣ. ಪರಮಾನಂದಯ್ಯ ಶಿಷ್ಯರು ಹತ್ತುಜನ ಅಂದುಕೊಳ್ಳೋಣ. ಹತ್ತುಜನ ನದಿಯೊಳಗೆ ಸ್ನಾನಕ್ಕೆ ಇಳಿದು ಹೊರಗೆ ಬಂದ ನಂತರ ಎಲ್ಲರೂ ಹೊರಗೆ ಬಂದಿದ್ದಾರೊ ಇಲ್ಲವೊ ಎಂದು ಅವರನ್ನವರು ಲೆಕ್ಕ ಮಾಡಿಕೊಂಡಿದ್ದಾರಂತೆ. ನದಿಯೊಳಗೆ ಇಳಿದಿರುವುದು ಹತ್ತುಜನ, ಪುನಃ ಹೊರಗೆ ಬಂದಿರುವುದು ಹತ್ತುಜನರೆ! ಆದರೂ ಒಬ್ಬನು ಕಡಿಮೆಯಾದಂತೆ, ಒಂಭತ್ತುಜನರೆ ಇರುವಂತೆ ಲೆಕ್ಕಿಸಿಕೊಂಡಿದ್ದಾರೆ. ಅಲ್ಲಿ ನಡೆದ ತಪ್ಪು ಏನೆಂದರೆ! ಲೆಕ್ಕಿಸುವವನು ತನ್ನನ್ನು ಬಿಟ್ಟು ಎದುರುಗಡೆ ಇರುವವರನ್ನು ಮಾತ್ರ ಲೆಕ್ಕಿಸುವುದರಿಂದ ಒಬ್ಬರು ಕಡಿಮೆಯಾದಂತೆ ಕಾಣಿಸಿದೆ. ಹಾಗೆಯೇ ಸೂರ್ಯ ಕುಟುಂಬದಲ್ಲಿ ಭೂಮಿ ಸಹ ಒಂದು ಗ್ರಹವಾಗಿ ಇದ್ದರೂ ಭೂಮಿಯನ್ನು ಲೆಕ್ಕಿಸದೆ ಇತರ ಗ್ರಹಗಳನ್ನು ಲೆಕ್ಕಿಸುವುದರಿಂದ ಒಂಭತ್ತು ಗ್ರಹಗಳಾಗಿ ತಿಳಿಯುತ್ತಿವೆ. ವಾಸ್ತವವಾಗಿ ಭೂಮಿಯನ್ನು ಸಹ ಲೆಕ್ಕಿಸಿದರೆ ಗ್ರಹಗಳು ಹತ್ತು ಎಂದು ತಿಳಿಯುತ್ತಿದೆ. ಪರಮಾನಂದಯ್ಯ ಶಿಷ್ಯರು ಹತ್ತುಜನ ಆದರೂ ಕೊನೆಗೆ ಅವರು ಒಂಭತ್ತು ಜನರೇ ಇರುವಂತೆ, ಒಬ್ಬನು ನೀರಿನಲ್ಲಿ ಹೊಡೆದುಕೊಂಡು ಹೋದಂತೆ ದುಃಖಪಡುತ್ತಿರುವಾಗ, ಪಕ್ಕದ ಮನುಷ್ಯ ಬಂದು ಎಲ್ಲರನ್ನು ಸೇರಿಸಿ ಲೆಕ್ಕಿಸಿ ಹತ್ತುಜನರಿರುವಂತೆ ತೀರ್ಮಾನಿಸಿ ಹೇಳಿದಹಾಗೆ, ಕೊನೆಗೆ ನಮಗೂ ಸಹ ಪಕ್ಕದ ಮನುಷ್ಯನ ಕಥೆ ಹೇಳಿ ವಿವರಿಸಿದರಾಗಲಿ ಗ್ರಹಗಳು ಹತ್ತೆಂದು ತಿಳಿಯದಹಾಗೆ ಹೋಗಿದೆ. ಇನ್ನೂ ವಿವರಿಸಿಕೊಂಡು ನೋಡಿದರೆ ಗ್ರಹಗಳು

ಒಂಭತ್ತು ಅಲ್ಲ ಒಟ್ಟು ಹನ್ನೆರಡೆಂದು ತಿಳಿಯುತ್ತದೆ. ಇಲ್ಲಿ ಅವುಗಳನ್ನು ಕುರಿತು ಹೇಳುವುದು ಸಂದರ್ಭವಲ್ಲ. ಆದ್ದರಿಂದ **"ಜ್ಯೋತಿಷ್ಯಶಾಸ್ತ್ರ"** ಎಂಬ ಗ್ರಂಥದಲ್ಲಿ ಅವುಗಳ ವಿವರವನ್ನು ತಿಳಿಸಬಲ್ಲೆವು. ಇಲ್ಲಿ ಸೂರ್ಯ ಕುಟುಂಬದಲ್ಲಿ ಗ್ರಹಗಳ ಸಂಖ್ಯೆ ಒಂಭತ್ತೆಂಬ ಮಾತು ತಪ್ಪೆಂಬುವುದಕ್ಕೆ ಮಾತ್ರವೆ ಈ ವಿವರ ಹೇಳಬೇಕಾಗಿದೆ.

ಕುಟುಂಬ ಎಂದರೆ ಕೆಲವರು ಒಂದು ಗುಂಪಾಗಿ ಸೇರಿ ಒಗ್ಗೂಡಿ ಕೆಲಸ ಮಾಡುವುದನ್ನು ಕುಟುಂಬ ಎನ್ನುತ್ತಿದ್ದೇವೆ. **"ಕುಟುಂಬ"** ಎನ್ನುವ ಪದ "ಕುಟುಂಬವಾಗಿ" ಹೇಳಲ್ಪಡುತ್ತಿದೆಯೆಂದು ಸಹ **"ಸುಬೋಧ"** ಗ್ರಂಥದಲ್ಲಿ "ನಿನ್ನ ಸಂಸಾರ" ಎನ್ನುವ ವ್ಯಾಸದಲ್ಲಿ ಹೇಳಿದ್ದೇವೆ. ಒಂದು ದೇಶದಲ್ಲಿ ಎಷ್ಟೋ ಕುಟುಂಬಗಳು ಇದ್ದರೂ, ಆ ದೇಶದಲ್ಲಿನ ಕುಟುಂಬಗಳೆಲ್ಲ ಪ್ರಭುತ್ವವೊಂದರ ಆಧೀನದಲ್ಲಿಯೇ ಇರುತ್ತವೆ. ಪ್ರಭುತ್ವ ಪ್ರಭುಕೈಯಲ್ಲಿ ಇರುತ್ತದೆ. ಪ್ರಭುತ್ವದಲ್ಲಿನ ಕಾನೂನಿಗೆ ಒಳಪಟ್ಟು ದೇಶದಲ್ಲಿನ ಎಲ್ಲಾ ಕುಟುಂಬಗಳು ಇರುತ್ತವೆ. ಯಾರೂ ಕಾನೂನನ್ನು ಅತಿಕ್ರಮಿಸಬಾರದು. ಹಾಗೆಯೇ ವಿಶ್ವದಲ್ಲಿನ ಎಷ್ಟೋ ಗ್ರಹ ಕುಟುಂಬಗಳಿವೆ. ದೇಶದಲ್ಲಿ ಕುಟುಂಬಗಳಿಗೆಲ್ಲ ಪ್ರಭು ಪ್ರಭುತ್ವ ದೊಡ್ಡದಾಗಿರುವಂತೆ, ವಿಶ್ವದಲ್ಲಿನ ಗ್ರಹ ಕುಟುಂಬಗಳಿಗು ಸಹ ಒಬ್ಬ ಪ್ರಭು, ಪ್ರಭುತ್ವ ಇದೆ. ಅದನ್ನು **'ದೈವ, ದೈವತ್ವ'** ಅನ್ನುತ್ತೇವೆ. ಮನುಷ್ಯ ಕುಟುಂಬಗಳು ಪ್ರಭುತ್ವ ಅಧೀನದಲ್ಲಿ ಇರುವಹಾಗೆ, ಗ್ರಹಕುಟುಂಬಗಳು ದೈವತ್ವ ಅಧೀನದಲ್ಲಿ ಇವೆ. ದೇಶದಲ್ಲಿನ ಎಲ್ಲಾ ಕುಟುಂಬಗಳಿಗು ಪ್ರಭುವು (ರಾಜ) ಯಜಮಾನ ಆದಂತೆ, ವಿಶ್ವದಲ್ಲಿನ ಎಲ್ಲಾ ಗ್ರಹಕುಟುಂಬಗಳಿಗು ಯಜಮಾನ ದೈವ ಒಬ್ಬನೇ ಎಂದು ತಿಳಿಯಬೇಕು. ದೇಶದಲ್ಲಿ ಪ್ರಭುವು ಸ್ವತಂತ್ರನಾಗಿ ಯಾರ ಅಧೀನದಲ್ಲಿ ಇಲ್ಲದಂತೆ, ವಿಶ್ವದಲ್ಲಿನ ದೇವರು ಸಹ ಸರ್ವ ಸ್ವತಂತ್ರನಾಗಿ ಯಾರ ಅಧೀನದಲ್ಲಿ ಇರುವುದಿಲ್ಲ. **'ಛತ್ರ'** ಅಂದರೆ ಕೊಡೆ ಎಂದು ಎಲ್ಲರಿಗೂ ಗೊತ್ತು. ಛತ್ರಿ ಬಿಸಲಿಗೆ ಮಳೆಗೆ ರಕ್ಷಣೆ ಕೊಡಬಲ್ಲದು. ದೇವರು ಯಾರ ರಕ್ಷಣೆಯಲ್ಲಿ ಇಲ್ಲದವನಾದ್ದರಿಂದ ದೈವವನ್ನು **"ನಛತ್ರನು"** ಎನ್ನುತ್ತೇವೆ. ನಛತ್ರನಾದ ದೈವಕ್ಕೆ ಗುರುತಾಗಿ ಆಕಾಶದಲ್ಲಿ

ನಕ್ಷತ್ರ ಇದೆ. ವಾಸ್ತವಕ್ಕೆ ನಕ್ಷತ್ರ ಎನ್ನುವ ಪದ ಪೂರ್ವದಲ್ಲಿ "ನಭತ್ರ" ಎನ್ನುವ ಪದವಾಗಿ ಇರುತ್ತಿತ್ತು. ಕಾಲಕ್ರಮವಾಗಿ ಕೊನೆಗೆ **ನಭತ್ರ ಎನ್ನುವ ಶಬ್ದ ನಕ್ಷತ್ರವೆಂಬ ಶಬ್ದವಾಗಿ** ಬದಲಾವಣೆಯಗಿದೆ. ನಕ್ಷತ್ರ ದೈವಕ್ಕೆ ಗುರುತೆಂದು ಸ್ವಲ್ಪ ವಿವರ ತಿಳಿದಿದೆ ಅಲ್ಲವೆ! ಪ್ರಪಂಚದಲ್ಲಿನ ಎಷ್ಟೋ ದೇಶಗಳಿಗೆ ಎಷ್ಟೋ ಜನ ರಾಜರಿ(ಪ್ರಭುವಿ)ರುವಂತೆ, ವಿಶ್ವದಲ್ಲಿನ ಎಷ್ಟೋ ಸೂರ್ಯ ಕುಟುಂಬಗಳಿಗೆ ದೊಡ್ಡದಾಗಿ ಎಷ್ಟೋ ನಕ್ಷತ್ರಗಳು ಇವೆಯೆಂದು ಬಾಹ್ಯರ್ಥವಾಗಿ ಕಾಣಿಸುತ್ತಿವೆ. **ಪ್ರಭು ಅಂದರೆ ರಾಜ ಎನ್ನುವಂತೆ ನಕ್ಷತ್ರ ಎಂದರೆ ದೇವರೆಂದು ತಿಳಿಯಬೇಕು.** ದೇವರು ಶುಭಕರವಾದವನಾದ್ದರಿಂದ ಆತನನ್ನು ಮಂಗಳನು ಎನ್ನುತ್ತಿದ್ದೇವೆ. ಗಲ್ಲುಶಿಕ್ಷೆ ಬಿದ್ದವನಿಗಾದರೂ ದೇಶಕ್ಕೆ ಪ್ರೆಸಿಡೆಂಟ್ (ಪ್ರಭು) ಆದವನು ಒಂದು ಸಹಿ ಮಾಡಿದರೆ ಶಿಕ್ಷೆ ಒಟ್ಟು ರದ್ದಾಗಿಹೋಗುತ್ತದೆ. ಹಾಗೆಯೇ ಕರ್ಮಶಿಕ್ಷೆ ಬಿದ್ದವನನ್ನು ವಿಶ್ವಾಧಿಪತಿಯಾದ ದೇವರು ಸಮ್ಮತಿಸಿದರೆ ಅವನು ಶಿಕ್ಷೆಯಿಂದ ಬಿಡುಗಡೆ ಹೊಂದಬಲ್ಲನು. **ಕರ್ಮಶಿಕ್ಷೆಯಿಂದ ಜೀವಿಯ ಬಿಡುಗಡೆಯನ್ನೇ ಮುಕ್ತಿ ಇಲ್ಲವೆ ಮೋಕ್ಷ** ಎನ್ನುತ್ತಿದ್ದೇವೆ. ಆದ್ದರಿಂದ ದೇವರನ್ನು **ಮುಕ್ತಿದಾತ ಇಲ್ಲವೆ ಮೋಕ್ಷದಾತ** ಅನ್ನುತ್ತೇವೆ. ಜೀವಿಯು ನಾಶವಾದಾಗಲೆ ಮುಕ್ತಿ ಹೊಂದುತ್ತಾನೆ. ಆದ್ದರಿಂದ ದೈವವನ್ನು **ಕಾಲನು** ಎಂದು ಅನ್ನುತ್ತಿದ್ದೇವೆ. ಹಾಗೆಯೇ **ಮಂಗಳನು** ಎಂದು ಅನ್ನುತ್ತಿದ್ದೇವೆ. ಮಂಗಳಕರವಾದ ದೇವರಿಗೆ ಗುರುತಾಗಿ ಪ್ರಾರಂಭದಲ್ಲಿ ಮೂರನೆಯ ದಿನವನ್ನು **ಮಂಗಳವಾರವೆಂದು** ಅನ್ನುತ್ತಿದ್ದೇವೆ. ಇಲ್ಲಿಯವರೆಗು ಹೇಳಿಕೊಂಡಿರುವುದನ್ನು ಅನುಸರಿಸಿ ಮಂಗಳವಾರಕ್ಕೆ ಇರುವ ಸ್ವಲ್ಪ ವಿವರವನ್ನು ತಿಳಿದುಕೊಂಡಿದ್ದೇವೆ.

ಆದಿಯಲ್ಲಿ **"ರಾಮ"** ಎನ್ನುವ ಪದವನ್ನು ದೈವಕ್ಕೆ ಉಪಯೋಗಿಸುತ್ತಿದ್ದರು. ದಶರಥರಾಮನು ಹುಟ್ಟುವುದಕ್ಕಿಂತ ಪೂರ್ವವೇ **"ಮರಾ"** ಎನ್ನುವ ಶಬ್ದದಿಂದ **'ರಾಮ'** ಎನ್ನುವ ಶಬ್ದ ಹುಟ್ಟಿದೆ. ರಾಮ ಅಂದರೂ ಮರಾ ಎಂದರೂ ಎರಡು ಒಂದೇ ಅರ್ಥ ಕೊಡುತ್ತಿವೆ. ದೈವಕ್ಕೆ ಬದಲು ಹೆಸರಾದ ರಾಮಾ ಶಬ್ದವನ್ನು ದಶರಥಪುತ್ರನಿಗೆ ಇಡುವುದು ನಡೆದಿದೆ. ತ್ರೇತಾಯುಗದಿಂದ

ದಶರಥರಾಮ ಹೆಸರು ಬಳಕೆಯಲ್ಲಿ ಬಂದರೆ, ಕೃತಯುಗದಿಂದ ಇದ್ದ ಆತ್ಮಾರಾಮ ಶಬ್ಧ ಮರೆಯಲ್ಲಿ ಬಿದ್ದುಹೋಗಿದೆ. ರಾಮ ಅಂದರೆ ದಶರಥ ರಾಮನೇ ಎಂದು ಎಲ್ಲರಿಗೂ ಗೊತ್ತು. ಅದೇ ವಿಧವಾಗಿ ಮಂಗಳ ಅನ್ನುವ ಹೆಸರು ದೇವರಿಗೆ ಸಂಬಂಧಿಸಿರುವುದಾಗಿದ್ದು ಅದು ಮರೆಯಲ್ಲಿ ಬಿದ್ದುಹೋಗಿ ಕೊನೆಗೆ ಕುಜಗ್ರಹಕ್ಕೆ ಮಂಗಳನೆಂದು ಹೆಸರು ಬಂದಿದೆ. ಕುಜ ಗ್ರಹಕ್ಕೆ ಮಂಗಳ ಎನ್ನುವ ಹೆಸರಿರುವುದರಿಂದ ಆ ಹೆಸರು ದೇವರದೆಂದು ತಿಳಿಯದಂತೆಹೋಗಿದೆ. ಆದ್ದರಿಂದ ಮಂಗಳ ಅಂದಾಗ ಅದಕ್ಕೆ ಸಮಾನವಾದ ಅರ್ಥಕೊಡುವ ನಕ್ಷತ್ರವನ್ನು ಯಾರೂ ಗುರುತಿಸದೆ ಕುಜಗ್ರಹವನ್ನೇ ಜ್ಞಾಪಕ ಮಾಡಿಕೊಳ್ಳುತ್ತಿದ್ದೇವೆ. ರಾಮ ಶಬ್ದ ದಶರಥ ಪುತ್ರನಿಗೆ ಅಂಟಿಕೊಂಡು ದಶರಥರಾಮನನ್ನು ಜ್ಞಾಪಕ ತಂದಂತೆ, ಮಂಗಳ ಶಬ್ದ ಕುಜಗ್ರಹಕ್ಕೆ ಅಂಟಿಕೊಂಡುಹೋಗಿ ಕುಜಗ್ರಹವನ್ನೇ ಜ್ಞಾಪಕಕ್ಕೆ ತರುತ್ತಿದೆ. ಆದ್ದರಿಂದ ಕೆಲವರು ಆದಿ, ಸೋಮ, ಮಂಗಳವಾರಗಳಿಗೆ ಅಧಿಪತಿಗಳು ಸೂರ್ಯ, ಚಂದ್ರ, ಕುಜಗ್ರಹಗಳೆಂದು ಅನ್ನುತ್ತಿದ್ದಾರೆ. ವಾಸ್ತವಕ್ಕೆ ಆದಿ, ಸೋಮ, ಮಂಗಳವಾರಗಳಿಗೆ ಅಧಿಪತಿಗಳಾಗಿ ಸೂರ್ಯ, ಚಂದ್ರ, ನಕ್ಷತ್ರಗಳನ್ನು ಹೇಳಬೇಕಾಗಿದೆ. ಜೀವಾತ್ಮ, ಆತ್ಮ ಎರಡು, ಶರೀರದಲ್ಲಿ ಇರುವಾಗ ಆತ್ಮಗಿಂತ ಪರವಾಗಿರುವ ಪರಮಾತ್ಮ ಹೇಗೆ ಶರೀರದಲ್ಲಿದೆಯೊ, ಹಾಗೆಯೇ ಸೂರ್ಯ, ಚಂದ್ರ ಎರಡು ಗ್ರಹಗಳು ಆಕಾಶದಲ್ಲಿ ಇರುವಾಗ ಗ್ರಹಕ್ಕಿಂತ ಬೇರೆಯಾಗಿರುವ ಗ್ರಹ ಎಂದು ಹೆಸರು ಇಲ್ಲದ ನಕ್ಷತ್ರ ಆಕಾಶದಲ್ಲಿಯೇ ಇದೆ. ಸೂರ್ಯ ಚಂದ್ರರಿಗಿಂತ ಅತೀತವಾದ ನಕ್ಷತ್ರ ಗ್ರಹ ಅಲ್ಲದಿದ್ದರೂ, 'ಮಂಗಳ' ಎನ್ನುವ ಬಿರುದು ನಕ್ಷತ್ರಕ್ಕೆ ಇರುವಾಗ ಕುಜಗ್ರಹ ಮಂಗಳನೆಂದು ಹೆಸರು ಹೊಂದಿರುವುದರಿಂದ ಕೊನೆಗೆ ನಕ್ಷತ್ರ ಸ್ಥಾನದಲ್ಲಿ ಕುಜಗ್ರಹ ನಿಂತುಹೋಗಿದೆ. ಆತ್ಮಜ್ಞಾನದ ಪ್ರಕಾರ ಮಂಗಳ ಎಂದರೆ ಕುಜಗ್ರಹವಲ್ಲವೆಂದು ನಕ್ಷತ್ರವೆಂದು ತಿಳಿಯಬೇಕು. ಇದರ ಪ್ರಕಾರ ದೇವರಿಗೆ ಗುರುತಾಗಿ ನಕ್ಷತ್ರವನ್ನು, ನಕ್ಷತ್ರದಿನವಾಗಿ ಮಂಗಳವಾರವನ್ನು ಲೆಕ್ಕಿಸಬೇಕಾಗಿದೆ. ಸೂರ್ಯ, ಚಂದ್ರ, ನಕ್ಷತ್ರಗಳಲ್ಲಿ ಸೂರ್ಯ ಚಂದ್ರರನ್ನು ಗ್ರಹಗಳನ್ನುತ್ತಿದ್ದೇವೆ. ನಕ್ಷತ್ರವನ್ನು ಗ್ರಹ ಅನ್ನುವುದಕ್ಕೆ ಸಾಧ್ಯವಿಲ್ಲ. ಸೂರ್ಯನನ್ನು ಸೂರ್ಯಗ್ರಹ ಅನ್ನಬಹುದು, ಚಂದ್ರನನ್ನು ಚಂದ್ರಗ್ರಹ

ಅನ್ನಬಹದು, ಆದರೆ ನಕ್ಷತ್ರವನ್ನು ನಕ್ಷತ್ರಗ್ರಹ ಎಂದು ಅನ್ನಲಾರೆವು. ಹಾಗೆಯೇ ಶರೀರದಲ್ಲಿನ ಯಾವ ಆತ್ಮ ಅಲ್ಲದಿರುವುದು ಪರಮಾತ್ಮ ಎಂದು ಹೇಳಬಹುದು.

ಆದಿವಾರ ಸೃಷ್ಠಿ ವಿಷಯವನ್ನು ತಿಳಿಸುವುದಾಗಿರುವಾಗ, ಸೋಮವಾರ ದೇವರ ಜ್ಞಾನ ವಿಷಯ ತಿಳಿಸುವುದಾಗಿರುವಾಗ, ಮೂರನೆಯದಾದ ಮಂಗಳ ವಾರ ನೇರವಾಗಿ ಪರಮಾತ್ಮನನ್ನು, ಪರಂಧಾಮವನ್ನು, ಮೋಕ್ಷವನ್ನು ತಿಳಿಸುವುದಾಗಿ ಇದೆ. ಆದಿವಾರಕ್ಕೆ ಸೂರ್ಯನು, ಸೋಮವಾರಕ್ಕೆ ಚಂದ್ರನು ಮುಖ್ಯರಾಗಿದ್ದು ಮಂಗಳವಾರಕ್ಕೆ ನಕ್ಷತ್ರ ಮುಖ್ಯವಾಗಿ ಇದೆ. ಸೂರ್ಯನು ಆಕಾಶದಲ್ಲಿ ಹಗಲು ಕಾಣಿಸಿ ರಾತ್ರಿ ಕಾಣಿಸನು. ಹಾಗೆಯೇ ಚಂದ್ರನು ರಾತ್ರಿ ಕಾಣಿಸಿ ಹಗಲು ಕಾಣಿಸನು. ಸೂರ್ಯಚಂದ್ರರು ಆಕಾಶದಲ್ಲಿ ಸ್ವಲ್ಪಸಮಯ ಕಾಣಿಸಿ ಸ್ವಲ್ಪ ಸಮಯ ಕಾಣಿಸುವುದಿಲ್ಲ. ಜಗತ್ತು ಇರುವವರೆಗೂ ಮನುಷ್ಯನಿಗೆ ಹುಟ್ಟು, ಜ್ಞಾನ ಅಗತ್ಯ. ಜಗತ್ತು ಇರುವವರೆಗು ಇರುವ ಹುಟ್ಟುವಿಕೆ ಜ್ಞಾನಗಳು ಜಗತ್ತು ಪ್ರಳಯವಾದಾಗ ಇಲ್ಲದಹಾಗೆ ಹೋಗುತ್ತದೆ. ಜಗತ್ತು ಪ್ರಭವ, ಪ್ರಳಯಗಳು ಹೊಂದುತ್ತಾ ಸ್ವಲ್ಪ ಕಾಲವಿದ್ದು ಸ್ವಲ್ಪಕಾಲ ಇಲ್ಲದಹಾಗೆ ಹೋಗುತ್ತಿದೆ. 108 ಕೋಟಿ ವರ್ಷಗಳಿರುವ ಜಗತ್ತು, 108 ಕೋಟಿಗಳ ವರ್ಷಗಳು ಇಲ್ಲದಹಾಗೆ ಹೋಗುತ್ತದೆ. ಆ ಸೂತ್ರದ ಪ್ರಕಾರವೆ ಪ್ರಪಂಚದಲ್ಲಿ ರಾತ್ರಿಹಗಲು ಏರ್ಪಟ್ಟಿವೆ. ಈ ಸೂತ್ರದ ಪ್ರಕಾರವೆ ಮನುಷ್ಯನ ಹುಟ್ಟು ಜ್ಞಾನಗಳು ಸ್ವಲ್ಪಕಾಲವಿದ್ದು ಸ್ವಲ್ಪ ಕಾಲ ಇರುವುದಿಲ್ಲವೆಂದು ತಿಳಿಸುವಹಾಗೆ, ಒಂದು ದಿನದಲ್ಲಿ ಸ್ವಲ್ಪಕಾಲ ಕಾಣಿಸಿ ಸ್ವಲ್ಪಕಾಲ ಕಾಣಿಸದ ಸೂರ್ಯಚಂದ್ರರನ್ನು ಗುರುತಿಗಾಗಿ ಇಟ್ಟಿದ್ದಾರೆ. ಹುಟ್ಟು, ಜ್ಞಾನವನ್ನು ತಿಳಿಸುವ ಆದಿ, ಸೋಮವಾರಗಳಿಗಿಂತ ಮೀರಿರುವುದು ಮಂಗಳವಾರ. ಮಂಗಳವಾರ ಶಾಶ್ವಿತವಾಗಿ ಎಂದಿಗೂ ಇರುವ ದೇವರನ್ನು ತಿಳಿಸುವುದು. ಮಂಗಳವಾರ, ಹುಟ್ಟು ಜ್ಞಾನಗಳ ನಂತರ ಮೋಕ್ಷ ಹೊಂದಬೇಕೆಂದು ತಿಳಿಸುವ ಸಂದೇಶಕೊಡುವುದಾಗಿದೆ. ಜ್ಞಾನದ ಮೂಲಕ ಲಭಿಸುವವನು ಶಾಶ್ವಿತವಾದ ದೇವರು! ದೇವರು ಅನಂತನು!! ಎಲ್ಲದಕ್ಕಿಂತ ದೊಡ್ಡವನು!!! ಆದ್ದರಿಂದಲೇ ಯಾವಾಗಲೂ ಆಕಾಶದಲ್ಲಿರುವ ನಕ್ಷತ್ರವನ್ನು, ಸೂರ್ಯಚಂದ್ರ

ಗೋಳಗಳೆಲ್ಲವುಗಳಿಗಿಂತ ಕೆಲವು ಲಕ್ಷಗಳಷ್ಟು ದೊಡ್ಡದಾಗಿರುವ ನಕ್ಷತ್ರವನ್ನು ದೇವರ ಚಿಹ್ನೆಯಾಗಿ ತೋರಿಸುವುದು ನಡೆದಿದೆ. ಆಳವಾದ ಬಾವಿಯೊಳಗೆ ಇಳಿದು, ಅಂದರೆ ಸೂರ್ಯರಶ್ಮಿ ಇಲ್ಲದಹಾಗೆ ಕತ್ತಲಾಗಿರುವ ಆಳವಾದ ಬಾವಿಯೊಳಗಿಂದ ಆಕಾಶಕಡೆ ನೋಡಿದರೆ ಹಗಲು ಸಹ ನಕ್ಷತ್ರಗಳು ಕಾಣಿಸುತ್ತವೆ. ನಕ್ಷತ್ರಗಳು ಹಗಲು ರಾತ್ರಿ ಎಂದಿಗೂ ಇರುತ್ತವೆ. ಎಲ್ಲಾ ಸಮಯಗಳಲ್ಲಿಯೂ ನಮ್ಮನ್ನು ನೋಡುತ್ತಿರುವ ದೇವರನ್ನು ಎಲ್ಲಾ ಸಮಯಗಳಲ್ಲಿಯೂ ನಮ್ಮ ಮೇಲಿರುವ ನಕ್ಷತ್ರಕ್ಕೆ ಹೋಲಿಸಿ ಹೇಳುವುದು ದೊಡ್ಡ ವಿಧಾನವೇ. ಮೋಕ್ಷವನ್ನು ಹೊಂದುವುದು ದೈವವನ್ನು ಹೊಂದಿದಂತೆ ಆಗುತ್ತದೆ. ದೈವವನ್ನು ಇಂತಹದೆಂದು ಹೇಳಲಾರೆವು. ದೇವರು ಎಲ್ಲದಕ್ಕು ಅತೀತವಾದವನು. ಆದ್ದರಿಂದ ಯಾವಕಡೆ ನಿರ್ಣಯಿಸಿ ಹೇಳಲಾರದೆ ಶುಭಪ್ರದವಾದವನೆಂದು ಹೇಳಿದ್ದೇವೆ. ಶುಭಪ್ರದವನ್ನು ಮಂಗಳವೆಂದು ಹೇಳುತ್ತಾ ಮೂರನೆಯ ದಿನವನ್ನು ಮಂಗಳವಾರವೆಂದು ಅಂದಿದ್ದೇವೆ.

ಮನುಷ್ಯನ ಜೀವನದಲ್ಲಿ ಮುಖ್ಯವಾದವು ಮೂರು ಘಟ್ಟಗಳಿವೆ. **ಒಂದು ಹುಟ್ಟು, ಎರಡನೆಯದು ಜೀವಿಸುವುದು, ಮೂರನೆಯದು ಮರಣಿಸುವುದು.** ಇವುಗಳನ್ನೇ ಆದಿ, ಮಧ್ಯ ಅಂತ್ಯಗಳನ್ನುತ್ತಿದ್ದೇವೆ. ಆದಿ, ಮಧ್ಯ, ಅಂತ್ಯಗಳಿರುವ ಎಲ್ಲರಿಗೂ ಮುಖ್ಯವಾದವು ಆದಿವಾರ, ಸೋಮವಾರ, ಮಂಗಳವಾರ. ಆದಿಯನ್ನು ಕುರಿತು ಆದಿವಾರ (ರವಿವಾರ), ಮಧ್ಯದನ್ನು ಕುರಿತು ಸೋಮವಾರ, ಅಂತ್ಯವನ್ನು ಕುರಿತು ಮಂಗಳವಾರಗಳು ಗುರುತಿಸಿಕೊಂಡಿದ್ದೇವೆ. ಹಾಗೆಯೇ ಆದಿ, ಮಧ್ಯ, ಅಂತ್ಯಗಳ ವಿವರವನ್ನು ತಿಳಿಸುವವಾಗಿ ಸೂರ್ಯನನ್ನು, ಚಂದ್ರನನ್ನು, ನಕ್ಷತ್ರವನ್ನು ಗುರುತಿಸಿಕೊಂಡಿದ್ದೇವೆ. ಈ ವಿಧವಾಗಿ ಗುರುತಿಸಿಕೊಳ್ಳುವುದು ಇಲ್ಲವೆ ತಿಳಿದುಕೊಳ್ಳುವುದು ಇಲ್ಲವೆ ಇತರರಿಗೆ ತಿಳಿಸುವುದು ಜ್ಞಾನವಾದರೆ ಅದರ ಪ್ರಕಾರ ಆಚರಿಸುವುದು ಆರಾಧನೆ ಆಗುತ್ತದೆ. ಈ ಆರಾಧನೆಯಲ್ಲಿ ನಿನ್ನನ್ನು ನೀನು ಗುರುತಿಸಿಕೊಳ್ಳುವುದಕ್ಕೆ ದೈವಭಾವನೆಯನ್ನು ಹೊಂದುವುದಕ್ಕೆ ಒಳ್ಳೆಯ ಅವಕಾಶವಿದೆ. ಪೂರ್ವದಲ್ಲಿ ಕೃತಯುಗದಲ್ಲಿಯೇ ನಮ್ಮ ಹಿರಿಯರು

ಜ್ಞಾನ ವಿಧಾನದಿಂದ ನಮಗೆ ಒಳ್ಳೆಯ ಮಾರ್ಗವನ್ನು ತೋರಿಸಿದ್ದಾರೆ. ಎಲ್ಲರಿಗೂ ಆಧಾರವಾದವನು, ಎಲ್ಲರನ್ನು ಸೃಷ್ಟಿಸಿದವನು, ಸರ್ವಕ್ಕು ಮೂಲವಾದವನು ಒಬ್ಬನೇ ದೇವರೆಂದು ತಿಳಿಯವಹಾಗೆ, ನಿಜವಾದ ಪರಮಾತ್ಮನನ್ನು (ಖುದಾನನ್ನು) ಬಿಟ್ಟು ಇತರರನ್ನು ಪೂಜಿಸದಂತಿರುವುದಕ್ಕೆ, ಮತ್ತೆ ಯಾವ ಇತರ ದೇವತೆಗಳನ್ನು ಪೂಜಿಸದಂತಿರುವುದಕ್ಕೆ, ಯಾವ ದೇವತೆಗಳಾದರು ಅಸಲಾದ ದೇವ (ಪರಮಾತ್ಮ) ರಿಂದಲೇ ಸೃಷ್ಟಿಸಲ್ಪಟ್ಟಿದ್ದಾರೆಂದು ತಿಳಿಯುವಹಾಗೆ, ದೇವರಿಂದ ಸೃಷ್ಟಿಸಲ್ಪಟ್ಟ ಏನನ್ನಾದರೂ ದೇವರೊಂದಿಗೆ ಸಮಾನವಾಗಿ ನೋಡದಂತಿರಲು, ಮನುಷ್ಯ ನಿಜವಾದ ಜ್ಞಾನಮಾರ್ಗದಲ್ಲಿ ಪ್ರಯಾಣಿಸುವುದಕ್ಕೆ, ಮೋಕ್ಷ ಹೊಂದಿ ದೇವರಲ್ಲಿ ಐಕ್ಯವಾಗುವಂತೆ ಮುಖ್ಯವಾದ ಆರಾಧನೆಯನ್ನು ಏರ್ಪಡಿಸಿದ್ದಾರೆ. ಪೂರ್ವದಲ್ಲಿ ಸಂಪೂರ್ಣ ಜ್ಞಾನಿಗಳಾದ ನಮ್ಮ ಹಿರಿಯರು ಏರ್ಪಡಿಸಿದ ಆರಾಧನೆ ಕ್ರಮ ಬಹಳ ದೊಡ್ಡದು. ತ್ರೇತಾಯುಗದಲ್ಲಿನ ವಶಿಷ್ಟ ವಿಶ್ವಾಮಿತ್ರರಿಗಿಂತ, ಮತ್ತು ದ್ವಾಪರಯುಗದಲ್ಲಿನ ವ್ಯಾಸನಿಗಿಂತ ದೊಡ್ಡವರಾದ ಕೃತಯುಗದ ಬ್ರಹ್ಮರ್ಷಿಗಳಿಂದ ಹೇಳಲ್ಪಟ್ಟ ಮತ್ತು ಆಚರಿಸಲ್ಪಟ್ಟ ಆರಾಧನೆಯೇ ತ್ರೈತಾರಾಧನೆ. ತ್ರೈತಾರಾಧನೆ ವಾರದಲ್ಲಿನ ಆದಿ, ಸೋಮ, ಮಂಗಳವಾರಗಳು ಮಾತ್ರ ಆಚರಿಸಲ್ಪಡುವುದಾಗಿ ಇದೆ. ತ್ರೈತಾರಾಧನೆ ಎಲ್ಲಾ ಆರಾಧನೆಗಳಿಗಿಂತ ಮೀರಿರುವುದಾಗಿ ದೇವರಿಗೆ ಹತ್ತಿರವಾಗಿ ತೆಗೆದುಕೊಂಡುಹೋಗುವುದಾಗಿದೆ. ತ್ರೈತಾರಾಧನೆ ದೊಡ್ಡ ಅನುಭೂತಿ ಯಿಂದ ಕೂಡಿಕೊಂಡಿರುವುದಾಗಿ ಆರಾಧನೆ ಸಮಯದಲ್ಲಿ ದೊಡ್ಡ ತೃಪ್ತಿಯನ್ನು ಏರ್ಪಡಿಸುತ್ತಿದೆ.

ತ್ರೈತಾರಾಧನೆ ಮೂರು ಭಾಗಗಳಾಗಿದೆ. ಆದಿ ಆರಾಧನೆ, ಮಧ್ಯ ಆರಾಧನೆ, ಅಂತ್ಯ ಆರಾಧನೆ ಎಂದು ಮೂರು ಆರಾಧನೆಗಳನ್ನು ಸೇರಿಸಿ ತ್ರೈತಾರಾಧನೆ ಎನ್ನುತ್ತಿದ್ದೇವೆ. ಮೊದಲು ಆದಿ ಆರಾಧನೆಯನ್ನು ಕುರಿತು ತಿಳಿದುಕೊಳ್ಳೋಣ.

# ಆದಿ ಆರಾಧನೆ

ಆದಿ ಆರಾಧನೆ ಆದಿವಾರ ಸೂರ್ಯೋದಯದಲ್ಲಿಯೇ ಮಾಡಬೇಕು. ಆದಿ ಆರಾಧನೆ ಸೃಷ್ಠಿ ವಿಷಯವನ್ನು ತಿಳಿಸುವುದಾಗಿರುವುದರಿಂದ ಮೊದಲ ದಿನವಾದ ಆದಿವಾರವೆ ಮಾಡಬೇಕಾಗಿದೆ. ಸೂರ್ಯೋದಯದಿಂದಲೆ ಸೃಷ್ಠಿ ಮೊದಲಾಗಿದೆ ಆದ್ದರಿಂದ ಸೂರ್ಯನು ಹುಟ್ಟುತ್ತಿರುವಾಗಲೆ ಮೊದಲ ಆರಾಧನೆ ನಡೆಯಬೇಕು. ಆದಿ ಆರಾಧನೆ ಮನುಷ್ಯನ ಹುಟ್ಟುವಿಕೆಯನ್ನು ಸೂಚಿಸುವುದಾದ್ದರಿಂದ ದೊಡ್ಡ ವಿಶೇಷವಾದ ಭಾವದಿಂದ ಕೂಡಿಕೊಂಡಿದೆ. ಆರಾಧನೆ ಒಂದು ಪದ್ಧತಿ ಪ್ರಕಾರ ಮಾಡಬೇಕಾಗಿದೆ. ಆದಿ ಆರಾಧನೆ ಪದ್ಧತಿ ಪ್ರಕಾರ ಆರಾಧನೆ ವಿಷಯ ತಿಳಿದ ಭಕ್ತರೆಲ್ಲರೂ ಒಂದೇ ಸ್ಥಳದಲ್ಲಿ ಸೇರಿ ಪ್ರಾರ್ಥನೆ ಮಾಡಬೇಕಾಗಿರುತ್ತದೆ. ಆದಿ ಆರಾಧನೆಗೆ ಎಲ್ಲರೂ ಬೆರೆಯುವುದರಿಂದ ಸಾಮೂಹಿಕ ಪ್ರಾರ್ಥನೆಯಂತೆ ಇರುತ್ತದೆ. ಪ್ರಯಾಣ ಸಮಯಗಳಲ್ಲಾಗಲಿ, ಒಂಟಿಯಾಗಿ ಇತರ ಪ್ರದೇಶಗಳಲ್ಲಿ ಇರುವಾಗಾಗಲಿ ತಾನೊಬ್ಬನೆ ಆರಾಧನೆ ಮಾಡಿಕೊಳ್ಳಬಹುದು. ಆರಾಧನೆಗೆ ಶುಭ್ರತೆ ಬಹಳ ಮುಖ್ಯ ಆರಾಧನೆ ಮಾಡುವ ಸ್ಥಳ ಪರಿಶುಭ್ರವಾಗಿರಬೇಕು. ಸಾಮೂಹಿಕ ಆರಾಧನೆಗಾಗಿ ಪ್ರತ್ಯೇಕಿಸಿ ಒಂದು ಸ್ಥಳವನ್ನು ಕೇಂದ್ರವಾಗಿ ಮಾಡಿಕೊಳ್ಳುವುದು ಒಳ್ಳೆಯದು. ಪ್ರಾರ್ಥನಾ ಸ್ಥಳ ಶುಭ್ರತೆಯೆ ಅಲ್ಲದೆ ಶರೀರ ಶುಭ್ರತೆಯೂ ಬಹಳ ಅಗತ್ಯ. ಪ್ರತಿಯೊಬ್ಬರು ಸ್ನಾನಮಾಡಿ ಪ್ರಾರ್ಥನೆಯಲ್ಲಿ ಪಾಲ್ಗೊಳ್ಳಬೇಕು. ಒಂದುವೇಳೆ ಯಾವಾಗಲಾದರೂ ಅನಾರೋಗ್ಯ ಪರಿಸ್ಥಿತಿಗಳಿಂದ ಸ್ನಾನ ಮಾಡಲಾರದೆಹೋದರೆ ತಪ್ಪದೆ ಮುಖ, ಕಾಲುಗಳು, ಕೈಗಳು, ಕಂಕಳು ನೀರಿನಿಂದ ಶುಭ್ರಮಾಡಿಕೊಳ್ಳಬೇಕು. ಪ್ರಯಾಣ ಸಮಯದಲ್ಲಿ ಸ್ನಾನ ಮಾಡಲಾರದೆಹೋದರೆ ನೀರು ಸಿಗದೆಹೋದರೆ ಕಡೆಗೆ ಎರಡು ಅಂಗೈಯಾದರೂ ತೊಳೆದುಕೊಳ್ಳಬೇಕು. ಅಂಗೈ ಶುಭ್ರಕ್ಕು ಸಹ ನೀರು ಸಿಗದ ಪಕ್ಷದಲ್ಲಿ ಫೇಸ್‌ಪೌಡರನ್ನು ಅಂಗೈಗಳಿಗೆ, ಮುಖಕ್ಕೆ, ಕಂಕಳಿಗೆ ಹಾಕಿಕೊಂಡು ಪ್ರಾರ್ಥನೆ ಮಾಡಬಹುದು. ಆದಿ ಪ್ರಾರ್ಥನೆಗೆ ಐದು ವರ್ಷಗಳ ಮಕ್ಕಳಿಂದಲೂ ಕುಟುಂಬ ಸದಸ್ಯರೆಲ್ಲರೂ ಪಾಲ್ಗೊಳ್ಳಬಹುದು. ಕುಟುಂಬ ಸದಸ್ಯರಿಗೆ ಆದಿ

ಪ್ರಾರ್ಥನಾ ಸಾರಾಂಶವನ್ನು ತಿಳಿಸಿ ಅವರನ್ನು ಪಾಲ್ಗೊಳ್ಳುವಂತೆ ಮಾಡಬೇಕು. ಪ್ರಾರ್ಥನೆಯಲ್ಲಿ ಪಾಲ್ಗೊಳ್ಳುವ ಸ್ತ್ರೀಯರನ್ನು ಪ್ರತ್ಯೇಕ ಸಾಲಿನಲ್ಲಿ ಕೂರಿಸಬೇಕು. ಸರ್ವರನ್ನು ಸೃಷ್ಟಿಸಿದ ಸೃಷ್ಟಿಕರ್ತನಾದ ದೇವರನ್ನು ಕುರಿತಾದ ಮತಾತೀತ ಆರಾಧನೆಯಾದ್ದರಿಂದ ಯಾವ ಮತಸ್ಥರಾದರು ಈ ಪ್ರಾರ್ಥನೆಯಲ್ಲಿ ಪಾಲ್ಗೊಳ್ಳ ಬಹುದು. ತ್ರೈತಾರಾಧನೆ ಪವಿತ್ರವಾದುದಾದ್ದರಿಂದ ಪ್ರಾರ್ಥನೆ ದಿನಗಳಲ್ಲಿ ತಪ್ಪದೆ ದುರಭ್ಯಾಸಗಳಿಗೆ ದೂರವಾಗಿರಬೇಕು. ತ್ರೈತ ಸಿದ್ಧಾಂತವನ್ನು ತಿಳಿದ ಪ್ರಬೋಧ ಸೇವಾ ಸಮಿತಿ ಸದಸ್ಯರು ವಿಧಿಯಾಗಿ ತ್ರೈತಾರಾಧನೆ ಮಾಡಬೇ ಕಾಗಿರುತ್ತದೆ. ಒಂದುವೇಳೆ ಅನಿವಾರ್ಯ ಕಾರಣಗಳಿಂದಾಗಲಿ, ಅನಾರೋಗ್ಯ ಕಾರಣ ಗಳಿಂದಾಗಲಿ ಆದಿ ಪ್ರಾರ್ಥನೆ ಮಾಡಲಾರದ ಸಂದರ್ಭದಲ್ಲಿ ನಂತರ ಉಳಿದ ಸಮಯದಲ್ಲಾಗಲಿ ಪ್ರಾರ್ಥನೆ ವಿಧಿಯಾಗಿ ಮಾಡಬೇಕು. ಸದಸ್ಯರು ಪ್ರಾರ್ಥನಾ ಸಮಯಕ್ಕೆ ಕನಿಷ್ಟ ಐದು ನಿಮಿಷಗಳು ಮೊದಲೆ ಆರಾಧನೆ ಸ್ಥಳಕ್ಕೆ ಸೇರಿರಬೇಕು. ಪ್ರಾರ್ಥನೆಗೆ ಬಂದಿರುವ ಪ್ರತಿಯೊಬ್ಬರನ್ನು ಮಾತನಾಡಿಸುವುದು ಸದಸ್ಯರು ವಿಧಿಯಾಗಿ ಮಾಡಬೇಕು. ಮಾತನಾಡಿಸುವುದು ಕೈಗಳು ಜೋಡಿಸಿದ ನಮಸ್ಕಾರದಿಂದ ಇರಬೇಕು. ನಮಸ್ಕಾರ ದೇವರಿಗೆ ಇಬ್ಬರು ಸಮಾನವೆಂದು ತಿಳಿಸುವ ಉದ್ದೇಶದಿಂದ ಇರಬೇಕು. ಪ್ರಾರ್ಥನಾ ಸ್ಥಳದಲ್ಲಿ ಶತ್ರುವಿಗಾದರು ತಪ್ಪದೆ ನಮಸ್ಕಾರ ಹೇಳಬೇಕು. ಪ್ರತಿ ಸದಸ್ಯನು ತ್ರೈತಾರಾಧನೆ ವಿವರ ಅರ್ಥ ತಿಳಿದವನಾಗಿ ಅವುಗಳ ಪ್ರತ್ಯೇಕತೆಯನ್ನು ಇತರರಿಗೆ ಹೇಳುವ ಸಾಮರ್ಥ್ಯ ಹೊಂದಿರಬೇಕು.

ಆದಿ ಆರಾಧನೆ ಮಾಡುವ ಸಮಯದಲ್ಲಿ ಪೂರ್ವಕ್ಕೆ ತಿರುಗಿ ಕುಳಿತುಕೊಳ್ಳಬೇಕು. ಸೂರ್ಯನು ಪೂರ್ವದಕಡೆ ಹುಟ್ಟುತ್ತಿದ್ದಾನೆ ಆದ್ದರಿಂದ ಮೊದಲ ಆರಾಧನೆ ಪೂರ್ವ ದಿಕ್ಕಿಗೆ ಕುಳಿತುಕೊಂಡು ಮಾಡಬೇಕು. ಶರೀರ ಅನುಕೂಲತೆಯನ್ನನುಸರಿಸಿ ಕುಳಿತುಕೊಳ್ಳುವುದು ಒಳ್ಳೆಯದು. ಸಾಧ್ಯ ಇರುವವರೆಗೂ ಎಲ್ಲರೂ ಒಂದೇ ಆಸನದಲ್ಲಿ ಕುಳಿತುಕೊಳ್ಳುವುದು ಶ್ರೇಯಸ್ಕರ.

ಎಲ್ಲದಕ್ಕಿಂತ ಮುಖ್ಯವಾದ ವಿಧಾನವೇನೆಂದರೆ ಪ್ರತಿಯೊಬ್ಬರು ಮೂರು ಕೋನಗಳಿರುವ ಬಿಳಿ ಬಟ್ಟೆಯನ್ನು ತಲೆಮೇಲೆ ಕಟ್ಟಿಕೊಳ್ಳಬೇಕು. ಗೀತೆಯಲ್ಲಿ ಹೇಳಿದಹಾಗೆ ಮೂರುಕೋನಗಳ ವಸ್ತ್ರವು **ತ್ರೈತಸಿದ್ಧಾಂತವನ್ನು** ತಿಳಿಸುವಂತೆ ಇರಬೇಕು. ಬಿಳಿ ಬಟ್ಟೆಯ ಎರಡು ಕೊನೆಗಳನ್ನು ತಲೆಮೇಲಿನಿಂದ ಗಡ್ಡದ ಕೆಳಗೆ ಕೂಡಿಸಿ ಮುಡಿಹಾಕಿ ಒಂದು ಕೊನೆಯನ್ನು ತಲೆಹಿಂದಕ್ಕೆ ಬಿಡಬೇಕು. ಮುಖದ ಕೆಳಗೆ ಎಡಗಡೆಯಿಂದ ಬಂದಿರುವಕೊನೆಯನ್ನು **ಜೀವಾತ್ಮ** ಎಂದು, ಬಲಗಡೆಯಿಂದ ಬಂದಿರುವ ಕೊನೆಯನ್ನು **ಆತ್ಮ** ಎಂದು ತಿಳಿಯಬೇಕು. ಗೀತೆಯಲ್ಲಿ ಹೇಳಿದಹಾಗೆ ಒಂದೇ ಶರೀರದಲ್ಲಿ




ಜೀವಾತ್ಮ ಆತ್ಮಗಳು ಸೇರಿ ನಿವಾಸಿಸುತ್ತಿವೆಯೆಂಬ ಅರ್ಥ ತಿಳಿಯುವಂತೆ ಎರಡು ಕೊನೆಗಳನ್ನು ಸೇರಿಸಿ ಕಟ್ಟಬೇಕು. ಶರೀರದಲ್ಲಿ ಮೂರನೆಯವನಾದ **ಪರಮಾತ್ಮನನ್ನು** ಬಟ್ಟೆವೊಂದರ ಮೂರನೆಕೊನೆಯಾಗಿ ತಿಳಿಯಬೇಕು. ಪರಮಾತ್ಮ (ದೇವರು) ಶರೀರದಲ್ಲಿ ಅಗೋಚರನಾಗಿ ಯಾರಿಗೂ ತಿಳಿಯದಹಾಗಿದ್ದಾನೆ ಆದ್ದರಿಂದ ಅದೇ ಅರ್ಥಬರುವಹಾಗೆ ಮೂರನೆಕೊನೆಯನ್ನು ಮುಂದೆನೋಡುವವರಿಗೆ ಕಾಣಿಸದಂತೆ ತಲೆ ಹಿಂದಕ್ಕಿರುವಂತೆ ಮಾಡಬೇಕು. ಮೂರುಕೊನೆಗಳ ಬಟ್ಟೆಯನ್ನು ಎರಡುಕೊನೆಗಳು ಸೇರಿಸಿ ಗಡ್ಡದ ಕೆಳಗೆ ಕಟ್ಟಿದರೆ ಮೂರನೆಕೊನೆ ಯಥಾವಿಧಿ ಯಾಗಿ ಹಿಂದಕ್ಕೇ ಇರುತ್ತದೆ. ಭಗವದ್ಗೀತೆಯಲ್ಲಿ ಹೇಳಿದಂತೆ ಆತ್ಮ

ಜೀವಾತ್ಮನೊಂದಿಗೆ ಕೂಟಸ್ಥನಾಗಿದ್ದಾನೆ ಎಂದು ತಿಳಿಯುವಂತೆ ಅರ್ಥದಿಂದ ಎರಡುಕೊನೆಗಳು ಮುಡಿಹಾಕುವುದು, ಮೂರನೆಯ ಪರಮಾತ್ಮ ಯಾರಿಗೂ ತಿಳಿಯದಹಾಗೆ ಆತ್ಮ ಜೀವಾತ್ಮಗಳಿಗಿಂತ ಅತೀತನಾಗಿದ್ದಾನೆಂದು ತಿಳಿಯುವಂತೆ ಅರ್ಥದಿಂದ ಮೂರನೆಕೊನೆಯ ಹಿಂದಿನ ಭಾಗದಲ್ಲಿ ನಿಂತುಹೋಗುವುದನ್ನು ನೋಡಿದರೆ **ತ್ರೈತಸಿದ್ಧಾಂತ** ಪೂರ್ತಿ ಕಾಣಿಸುತ್ತಿದೆ. **ಜೀವಾತ್ಮ (ಕ್ಷರನು), ಆತ್ಮ (ಅಕ್ಷರನು), ಪರಮಾತ್ಮ (ಪುರುಷೋತ್ತಮನು)** ಇರುವಿಕೆಯನ್ನು ತಿಳಿಸುವ ನಿಮಿತ್ತವೇ ತಲೆಮೇಲೆಯೆ ಬಟ್ಟೆಯನ್ನು ಕಟ್ಟಬೇಕು. ಆತ್ಮಗಳನ್ನು ತಿಳಿಸುವ ಚಿಹ್ನೆಯಾಗಿ ಮೂರುಕೊನೆಗಳ ಬಟ್ಟೆಯನ್ನು ಬಳಸುತ್ತಿದ್ದೇವೆ ಆದ್ದರಿಂದ ಆತ್ಮಗಳ ಸ್ವಚ್ಛತೆಯನ್ನು ತಿಳಿಸುವಂತೆ ಬಿಳಿ ವಸ್ತ್ರವನ್ನು ಬಳಸಬೇಕು.

ಬಿಳಿ ವಸ್ತ್ರವನ್ನು ತಲೆಮೇಲೆ ಕಟ್ಟಿಕೊಂಡು **ಸೂರ್ಯೋದಯಕ್ಕೆ ಐದು ನಿಮಿಷಗಳ ಮೊದಲೆ ಪ್ರಾರ್ಥನೆಯಲ್ಲಿ ಕುಳಿತುಕೊಳ್ಳಬೇಕು, ಸೂರ್ಯನು ಉದಯಿಸುವಾಗ ಪ್ರಾರ್ಥನೆಯಲ್ಲಿ ಇರಬೇಕೆಂಬುವುದು ಆದಿ ಪ್ರಾರ್ಥನೆವೊಂದರ ನಿಯಮ**. ಸೂರ್ಯೋದಯದ ನಂತರ ಐದು ನಿಮಿಷಗಳು ಪ್ರಾರ್ಥನೆಯಲ್ಲಿದ್ದು ಪ್ರಾರ್ಥನೆಕಾಲ ಹತ್ತು ನಿಮಿಷಗಳಿರುವಂತೆ ನೋಡಿಕೊಳ್ಳಬೇಕು. ಪ್ರಾರ್ಥನೆ ಸಮಯದಲ್ಲಿ ಎಡಗೈ ಹಸ್ತವನ್ನು ಗಡ್ಡದ ಕೆಳಗೆ ಆನಿಸಿ ಇಟ್ಟುಕೊಳ್ಳಬೇಕು. ಹಾಗೆಯೇ ಬಲಗೈ ಹಸ್ತವನ್ನು ತಲೆಮೇಲೆ ಆನಿಸಿ ಇಟ್ಟುಕೊಳ್ಳಬೇಕು. ಹಾಗಿಟ್ಟು ಕೊಳ್ಳುವುದರಿಂದ ಗಮನವೆಲ್ಲವೂ ತಲೆಮಧ್ಯದಲ್ಲಿ ಏರ್ಪಡುತ್ತದೆ. ಮೇಲೆ ಕೆಳಗೆ ಕೈಗಳನ್ನಿಟ್ಟುಕೊಂಡು ಕಣ್ಣು ಮುಚ್ಚಿಕೊಂಡು ಕುಳಿತುಕೊಳ್ಳುವುದರಿಂದ ಮನೋದೃಷ್ಠಿ ತಲೆಮಧ್ಯಭಾಗದಲ್ಲಿ ಸೇರುವುದಕ್ಕೆ ಅವಕಾಶವಿದೆ. ಆದಿವಾರ ಸೂರ್ಯೋದಯದಲ್ಲಿ ಮಾಡುವ ಪ್ರಾರ್ಥನೆ ಸೃಷ್ಠಿ ಮೊದಲನ್ನು ತಿಳಿಸುವುದಲ್ಲದೆ, ನಿನ್ನ ಹುಟ್ಟುವಿಕೆಯನ್ನು ಜ್ಞಾಪಕ ಮಾಡುತ್ತದೆ. ಆಗಲೇ ಹುಟ್ಟಿದವನಿಗೆ, ಅವನ ತಲೆಯಲ್ಲಿ ಯಾವ ಗುಣಗಳು ಇರುವುದಿಲ್ಲ. ಹುಟ್ಟಿದ ಶಿಶುವಿಗೆ ಯಾವ ಗುಣಗಳಿರುವುದಿಲ್ಲ ಆದ್ದರಿಂದ ಶಿಶುವನ್ನು ದೇವರಿಗೆ ಸಮಾನವಾಗಿ ಕೆಲವರು ವರ್ಣಿಸಿದ್ದಾರೆ.

ಆದಿ ಆರಾಧನೆಯಲ್ಲಿ, ಸೂರ್ಯೋದಯದಿಂದ ಶಿಶುವಿನ ಹುಟ್ಟುವಿಕೆ ಸಮಾನವಾದ್ದರಿಂದ, ಆ ಸಮಯದಲ್ಲಿ ಶಿಶುವಿಗೆ ತಲೆಯಲ್ಲಿ ಗುಣಗಳು ಇಲ್ಲದಹಾಗೆ ಆರಾಧಕನ ತಲೆಯಲ್ಲಿ ಸಹ ಯಾವ ಗುಣಸಂಕಲ್ಪವು ಇಲ್ಲದಹಾಗೆ ಇರಬೇಕು. ಆ ಹತ್ತು ನಿಮಿಷಗಳು ಹಾಗೆಯೇ ಇರುವುದಕ್ಕೆ ಪ್ರಯತ್ನ ಮಾಡಬೇಕು. ಹುಟ್ಟಿದ ಶಿಶೂವಿಗೆ ಸಮಾನವಾಗಿರುವ ಆರಾಧನೆ ಆದ್ದರಿಂದ ಇದು ಭಗವದ್ಗೀತೆಯಲ್ಲಿ ಹೇಳಿದ ಬ್ರಹ್ಮಯೋಗ ಸಾಧನೆ ಆಗುತ್ತದೆ. ಕ್ರಮದಲ್ಲಿ ಮೊದಲನೆಯದಾದ ಆದಿ ಪ್ರಾರ್ಥನೆ ಮೊದಲ ದಿನವಾದ ಆದಿವಾರ ಮಾಡುವುದೇ ಅಲ್ಲದೆ ಬ್ರಹ್ಮ, ಕರ್ಮ, ಭಕ್ತಿ ಯೋಗವೆಂಬ ಮೂರು ಯೋಗಪದ್ಧತಿಗಳಲ್ಲಿ ಮೊದಲನೆಯದಾದ ಬ್ರಹ್ಮಯೋಗವನ್ನು ಆಚರಿಸಿದಂತಾ ಗುತ್ತದೆ. ಸಾಮೂಹಿಕ ಪ್ರಾರ್ಥನೆ ಆಗಿರುವುದರಿಂದ ಎಲ್ಲರೂ ಒಂದೇಸಲ ಪ್ರಾರಂಭಿಸಿ ಒಂದೇಸಲ ಮುಗಿಸುವುದಕ್ಕೆ ಮತ್ತು ಎಲ್ಲರೂ ಹತ್ತುನಿಮಿಷಗಳವರೆಗೇ ಪ್ರಾರ್ಥನೆ ಮಾಡುವುದಕ್ಕೆ ಅನುಕೂಲವಾಗಿರುವಂತೆ ಪೂರ್ವದಲ್ಲಿ ದೇವರ ಜೀಜಾಕ್ಷರವಾದ "ಓಂ" ಕಾರನಾದದಿಂದ ಪ್ರಾರಂಭಿಸಿ ಕೊನೆಯಲ್ಲಿ ಅದೇ ನಾದದಿಂದ ಮುಗಿಸುತ್ತಿದ್ದರು. ಉದಯವು ಆದಿ ಪ್ರಾರ್ಥನೆ ನಂತರ ಯಾರ ಕೆಲಸಗಳು ಅವರು ಮೊಡಿಕೊಳ್ಳಬಹುದು. ಈ ವಿಧವಾಗಿ ಎಷ್ಟೋ ಸಾರಾಂಶವಾದ, ಆಚರಣೆಯಲ್ಲಿರುವ ಆದಿ ಪ್ರಾರ್ಥನೆ ಕಾಲಗರ್ಭದಲ್ಲಿ ಸೇರಿಹೋಗಿದೆ. ಪುನಃ ಅದನ್ನು ಪುನರುದ್ಧರಿಸಿ ಪೂರ್ವದ ಆಚಾರಕ್ಕೆ ಎಲ್ಲರೂ ಸೇರಿ ಪ್ರಾಣ ಕೊಡೋಣ.

# ಮಧ್ಯಾರಾಧನೆ

ಮಧ್ಯಾರಾಧನೆ ಮಧ್ಯಾಹ್ನ ಸರಿಯಾಗಿ ಹನ್ನೆರಡು ಗಂಟೆಗಳ ಸಮಯದಲ್ಲಿ ಸೂರ್ಯನು ನಡುನೆತ್ತಿಯಲ್ಲಿರುವಾಗ ಮಾಡಬೇಕು. ಆದಿ ಪ್ರಾರ್ಥನೆಯಲ್ಲಿ

ಪೂರ್ವಕ್ಕೆ ತಿರುಗಿ ಕುಳಿತುಕೊಂಡರೆ, ಮಧ್ಯಪ್ರಾರ್ಥನೆಯಲ್ಲಿ ದಕ್ಷಿಣ ದಿಕ್ಕಿಗೆ ತಿರುಗಿ ಕುಳಿತುಕೊಳ್ಳಬೇಕು. ಮೊದಲ ಪ್ರಾರ್ಥನೆಯಲ್ಲಿರುವಂತೆ ಮಧ್ಯಪ್ರಾರ್ಥನೆಯಲ್ಲಿ ಸಹ ತಲೆಮೇಲೆ ಬಟ್ಟೆಕಟ್ಟಿಕೊಳ್ಳುವುದು ಕೈಗಳು ಇಟ್ಟುಕೊಳ್ಳುವುದು ಮಾಡಬೇಕು. ಮಧ್ಯಪ್ರಾರ್ಥನೆ ಎರಡನೆಯ ದಿನವಾದ ಸೋಮವಾರ ಮಾಡಬೇಕು. ಸೋಮವಾರ ದೈವಜ್ಞಾನಕ್ಕೆ ಸಂಬಂಧಿಸಿದ ದಿನವಾದ್ದರಿಂದ ಪ್ರಾರ್ಥನಾಕಾಲದಲ್ಲಿ ತಲೆಯಲ್ಲಿ ಜ್ಞಾನವೊಂದರ ಜ್ಞಾಪಕಹೊಂದಿ ತನಗೆ ಸಂಭವಿಸುವ ಪ್ರತಿಯೊಂದು, ತನ್ನಿಂದ ಮಾಡಲ್ಪಡುವ ಪ್ರತಿಯೊಂದು, ತಾವು ಅನುಭವಿಸುವ ಪ್ರತಿಯೊಂದು ಕರ್ಮ ನಿರ್ಣಯದ ಪ್ರಕಾರ ನಡೆಯುತ್ತಿವೆಯೆಂದು ತನ್ನ ಪ್ರಮೇಯವೇನು ಇಲ್ಲವೆಂದು ತಿಳಿಯುತ್ತಿರಬೇಕು. ಪ್ರಾರ್ಥನಾ ಸಮಯದಲ್ಲಿ ಸಹ ಹತ್ತು ನಿಮಿಷಗಳಿರುವಂತೆ ನೋಡಿಕೊಳ್ಳಬೇಕು. ಆದಿ ಪ್ರಾರ್ಥನೆ ಪ್ರಾರಂಭಿಸಿದಂತೆ ಎಲ್ಲರೂ 'ಓಂ' ಶಬ್ಧದಿಂದ ಪ್ರಾರಂಭಿಸಿ 'ಓಂ' ಶಬ್ಧದಿಂದ ಮುಗಿಸಬೇಕು. ಓಂ ಶಬ್ಧವನ್ನು ಮೊದಲು ಹೇಳುವುದಕ್ಕು ಮತ್ತು ಪ್ರಾರ್ಥನೆ ಕೊನೆಯಲ್ಲಿ ಹೇಳುವುದಕ್ಕು ಮೊದಲೆ ಒಬ್ಬರನ್ನು ನಿರ್ಣಯಿಸಿಕೊಂಡಿರಬೇಕು. ಮಧ್ಯಪ್ರಾರ್ಥನಾ ಮಧ್ಯಾಹ್ನವೇ ಮಾಡಬೇಕು. ಅನಿವಾರ್ಯಕಾರಣಗಳಿಂದಾಗಲಿ, ಆರೋಗ್ಯರೀತ್ಯ ಆ ಸಮಯಕ್ಕೆ ಮಾಡಲಾರ ದೆಹೋದರೆ ಇತರ ಸಮಯದಲ್ಲಾಗಲಿ ತಪ್ಪದೆ ಮಾಡಬೇಕು. ಸೋಮವಾರ ಪ್ರಾರ್ಥನೆಗೂ ಸಹ ಆದಿವಾರ ಪ್ರಾರ್ಥನೆಗೂ ಶುಭ್ರವಾಗಿರುವಂತೆಯೆ ಇರಬೇಕು. ಸೋಮವಾರ ಮಧ್ಯಪ್ರಾರ್ಥನೆಯಲ್ಲಿ ದಿಕ್ಕು, ಭಾವನೆ ಹೊರತು ಎಲ್ಲಾ ಆದಿ ಪ್ರಾರ್ಥನೆ ಪಾಲಿಸಿದಂತೆ ಪಾಲಿಸಬೇಕು.

ಮಧ್ಯಪ್ರಾರ್ಥನೆ ಜೀವನ ಜ್ಞಾನಕ್ಕೆ ಸಂಬಂಧಿಸಿರುವುದು ಆದ್ದರಿಂದ ಪ್ರಪಂಚದಲ್ಲಿ ಪಾತ್ರಧಾರನಾಗಿ ನಡೆದುಕೊಳ್ಳುವ ಪ್ರತಿ ಮನುಷ್ಯ ತನ್ನನ್ನು ನಡೆಸುವ ಸೂತ್ರ ಕರ್ಮವೆಂದು, ಕರ್ಮಸೂತ್ರ ಕದಲಿಸುವಂತೆ ಕದಲುತ್ತಿದ್ದೇನೆಂದು ಸ್ವತಃವಾಗಿ ತಾನು ಕದಲುವ ಸ್ವತಂತ್ರನಲ್ಲವೆಂದು ಜ್ಞಾನ ಹೊಂದಿರುವಂತೆ ಮಧ್ಯಪ್ರಾರ್ಥನೆ ಏರ್ಪಡಿಸಲ್ಪಟ್ಟಿದೆ. ಮಧ್ಯಪ್ರಾರ್ಥನೆಯಲ್ಲಿ ತಾನು ಕರ್ಮಬದ್ಧನೆಂದು, ಪ್ರತಿ ಕೆಲಸ

ನಾನು ಮಾಡುವುದು ಅಲ್ಲ ನನ್ನಿಂದ ಮಾಡಿಸಲ್ಪಡುತ್ತಿದೆಂದು, ನನ್ನಿಂದ ನಡೆಯುವ ಕಾರ್ಯ ನಾನು ಮಾಡುತ್ತಿಲ್ಲವೆಂದು ಯೋಚಿಸುವುದರಿಂದ ಮನುಷ್ಯ ಜೀವನದಲ್ಲಿ ಸಹ ಅದೇ ಜ್ಞಾನ ಜ್ಞಾಪಕವಿದ್ದು, ಯಾವ ಕರ್ಮವನ್ನೂ ಅಂಟಿಸಿಕೊಳ್ಳುವುದು ನಡೆಯುವುದಿಲ್ಲ. ಮಧ್ಯಪ್ರಾರ್ಥನೆ ಅಹಮ್ ಇಲ್ಲದ ವಿಧಾನವನ್ನು ಅಭ್ಯಾಸ ಮಾಡುತ್ತಿದೆ. ಈ ಅಭ್ಯಾಸವನ್ನು ಭಗವದ್ಗೀತೆಯಲ್ಲಿ ಹೇಳಿದ ಎರಡನೆಯದಾದ ಕರ್ಮಯೋಗ ಎಂದು ತಿಳಿಯಬೇಕು. ಹುಟ್ಟಿದಾಗಿನಿಂದ ಪ್ರತಿ ಮನುಷ್ಯ ಸಾವಿನ ಕಡೆ ಪ್ರಯಾಣಿಸುತ್ತಿದ್ದಾನೆ. ಜನ್ಮದಿಂದ ಪ್ರತಿ ಮನುಷ್ಯನೊಂದರ ಜೀವನ ಮರಣದ ಕಡೆಗೆ ಸಾಗುತ್ತಿದೆ. ಮರಣಕ್ಕೆ ಅಧಿಪತಿ ಪರಮಾತ್ಮಯೆಂದು, ಆತನೆ ಯಮನೆಂದು ಆತನ ದಿಕ್ಕು ದಕ್ಷಿಣವೆಂದು ಹೇಳಿಕೊಂಡಂತೆ ಶರೀರದಲ್ಲಿ ಜೀವಾತ್ಮ ಬಲಗಡೆ ಕಾಲ ದ್ವಾರಗಳ ಮೂಲಕವೇ ಮೋಕ್ಷ ಹೊಂದಬೇಕಾಗಿದೆ. ಜೀವಿಗೆ ಮರಣವಾಗಲಿ, ಮೋಕ್ಷವಾಗಲಿ ಕಾಲಚಕ್ರದಲ್ಲಿ ಬಲಗಡೆ ದ್ವಾರಗಳ ಮೂಲಕವೇ ನಡೆಯುತ್ತದೆ. ಈ ವಿಷಯವು ನಮ್ಮಿಂದ ರಚಿಸಲ್ಪಟ್ಟ **"ತ್ರೈತ ಸಿದ್ಧಾಂತ ಭಗವದ್ಗೀತೆ"** ಅಕ್ಷರಪರಬ್ರಹ್ಮಯೋಗವೆಂಬ ಅಧ್ಯಾಯದಲ್ಲಿಯೂ ಮತ್ತು **"ಪ್ರಬೋಧ"** ಗ್ರಂಥದಲ್ಲಿ ಕರ್ಮ, ಕಾಲ, ಬ್ರಹ್ಮಚಕ್ರಗಳೆಂಬ ಅಧ್ಯಾಯದಲ್ಲಿಯು ವಿಸ್ತಾರವಾಗಿ ಹೇಳಲಾಗಿದೆ. ಜೀವನದ ಪ್ರಯಾಣ ಮರಣ ಇಲ್ಲವೆ ಮೋಕ್ಷದಕಡೆಗೆ ಆದ್ದರಿಂದ ಅವುಗಳ ದ್ವಾರಗಳು ಬಲಗಡೆ ಇರುವುದರಿಂದ ಆದಿವಾರ ಪೂರ್ವದಕಡೆ ಕುಳಿತು ಕೊಂಡವರು ಎರಡನೆ ದಿನ ಸೋಮವಾರ ಬಲಗೈಕಡೆ ತಿರುಗಿ ದಕ್ಷಿಣದಕಡೆ ಕುಳಿತುಕೊಳ್ಳಬೇಕಾಗಿದೆ. ಮಧ್ಯಾರಾಧನೆ ಸೋಮವಾರ ಆದ್ದರಿಂದ ಜ್ಞಾನವೊಂದರ ಜ್ಞಾಪಕ ಹೊಂದಿರುವುದು, ಜ್ಞಾನ ಗಮ್ಯ ಬಲಗಡೆಯಾದ್ದರಿಂದ ದಕ್ಷಿಣದಿಕ್ಕಿಗೆ ತಿರುಗಿ ಕುಳಿತುಕೊಳ್ಳುವುದು ಪ್ರತ್ಯೇಕತೆ. ಸೋಮವಾರ ಒಂದರ ಆರಾಧನೆ ವಿವರ ತಿಳಿದು ಆಚರಿಸುವ ವ್ಯಕ್ತಿ ನಂತರ ಅದೇ ಜ್ಞಾಪಕದಿಂದ ಕರ್ಮಯೋಗವನ್ನು ಆಚರಿಸುತ್ತಾನೆ. ಜೀವನದಲ್ಲಿ ಕರ್ಮಯೋಗ ಆಚರಣೆ ಅಳವಡಿಸಿಕೊಳ್ಳುವುದರ ಮೂಲಕ ಮನುಷ್ಯ ಭಗವದ್ಗೀತೆಯಲ್ಲಿ ದೇವರು ಹೇಳಿದಹಾಗೆ **ಯಜ್ಞಕರ್ಮ** ಆಚರಿಸಿದಂತಾಗುತ್ತದೆ. ಯಜ್ಞಕರ್ಮ ಅಂದರೆ

ಬರುವಂತಹ ಕರ್ಮವನ್ನು ಸುಟ್ಟುಹಾಕುವುದೆಂದು ಅರ್ಥ. ಕರ್ಮವನ್ನು ಅಂಟದ ವಿಧಾನ ಸೋಮವಾರ ಆಚರಿಸುವ ಮಧ್ಯಾರಾಧನೆಯಿಂದ ಸಾಧ್ಯವಾಗಿ ಮನುಷ್ಯ ಮೋಕ್ಷವನ್ನು ಪಡೆಯಬಹುದು. ಆದಿವಾರ ಮಾಡುವ ಸೂರ್ಯೋದಯ ಪ್ರಾರ್ಥನೆಯಲ್ಲಿ ಬ್ರಹ್ಮಯೋಗ, ಸೋಮವಾರ ಮಧ್ಯಾಹ್ನ ಮಾಡುವ ಮಧ್ಯ ಪ್ರಾರ್ಥನೆಯಲ್ಲಿ ಕರ್ಮಯೋಗ ಅಭ್ಯಾಸವಾಗುತ್ತದೆ. ತ್ರೈತಾರಾಧನೆಯಲ್ಲಿ ಭಾಗಗಳಾದ ಆದಿ, ಸೋಮವಾರಗಳ ಪ್ರಾರ್ಥನೆಯಲ್ಲಿ ಇಷ್ಟು ವಿಶೇಷವಿರುವಾಗ ಮೂರನೆಯ ಪ್ರಾರ್ಥನೆ ಏನೋ ತಿಳಿದುಕೊಳ್ಳೋಣ.

# ಅಂತ್ಯಾರಾಧನೆ

ಆದಿ ಪ್ರಾರ್ಥನೆ ವಾರದಲ್ಲಿ ಮೊದಲನೆಯದಾದ ಆದಿವಾರ ಮಾಡಿದರೆ, ಮಧ್ಯಪ್ರಾರ್ಥನೆ ವಾರದಲ್ಲಿ ಎರಡನೆಯ ದಿನವಾದ ಸೋಮವಾರ ಮಾಡಿದರೆ, ಅಂತ್ಯಪ್ರಾರ್ಥನೆ ವಾರದಲ್ಲಿ ಮೂರನೆಯ ದಿನವಾದ ಮಂಗಳವಾರ ಮಾಡಲಾಗುತ್ತಿದೆ. ಆದಿವಾರ ಜೀವಿಯ ಹುಟ್ಟುವಿಕೆಯನ್ನು, ಸೋಮವಾರ ಜೀವನದಲ್ಲಿ ದೈವಜ್ಞಾನವನ್ನು ತಿಳಿಸಿದರೆ ಮಂಗಳವಾರ ಸರಾಸರಿ ಮೋಕ್ಷವನ್ನೇ ತಿಳಿಸುತ್ತಿದೆ. ಶುಭಪ್ರದವಾದ ಮೋಕ್ಷವನ್ನು ತಿಳಿಯುವ ಆರಾಧನೆ ಮೂರನೆಯ ದಿನವಾದ ಮಂಗಳಪ್ರದವಾದ ಮಂಗಳವಾರ ಮಾಡಲ್ಪಡುತ್ತಿದೆ. ಮಂಗಳವಾರ ಮಾಡುವ ಅಂತ್ಯ ಆರಾಧನೆಯಿಂದ ಮೊತ್ತವು ತ್ರೈತಾರಾಧನೆಗಳು ಪೂರ್ತಿ ಆಗುತ್ತಿವೆ. ತ್ರೈತಾರಾಧನೆಯಲ್ಲಿ ಕೊನೆಯದಾದ ಅಂತ್ಯಾರಾಧನೆ ಸಹ ಬಿಳಿ ಬಟ್ಟೆಯನ್ನು ತಲೆಮೇಲೆ ಧರಿಸಿ, ಕೈಗಳು ತಲೆಮೇಲೆ, ಕೆಳಗೆ ಇಟ್ಟುಕೊಂಡು ಆದಿ, ಮಧ್ಯ ಆರಾಧನೆಗಳಂತೆಯೆ ಮಾಡಬೇಕಾಗಿರುತ್ತದೆ. ಕೊನೆಯದಾದ ಅಂತ್ಯಾರಾಧನೆ ಮಂಗಳವಾರ ಸೂರ್ಯಾಸ್ತಮಯದಲ್ಲಿ ಮಾಡಬೇಕು. **ಸೂರ್ಯನು ಅಸ್ತಮಿಸುವ ಮೊದಲು ಐದು ನಿಮಿಷಗಳಿರುವಾಗ ಪ್ರಾರಂಭಿಸಿ, ಅಸ್ತಮಿಸಿದ ನಂತರ ಐದು ನಿಮಿಷಗಳಿರುವಂತೆ ಮಾಡಬೇಕು.** ಒಟ್ಟು ಹತ್ತು

ನಿಮಿಷಗಳ ಪ್ರಾರ್ಥನಾಸಮಯದಲ್ಲಿ ಉಳಿದ ಪ್ರಾರ್ಥನೆಗಳಂತೆ ಬಟ್ಟೆ, ಕೈಗಳಿರುವಾಗ ಕುಳಿತುಕೊಂಡ ದಿಕ್ಕು, ತಲೆಯಲ್ಲಿನ ಉದ್ದೇಶ ಬೇರೆಯಾಗಿರುತ್ತದೆ. ಮಂಗಳವಾರ ಸೂರ್ಯಾಸ್ತಮಯದಲ್ಲಿ ಮಾಡುವ ಪ್ರಾರ್ಥನೆ ಪಶ್ಚಿಮ ದಿಕ್ಕಿಗೆ ತಿರುಗಿ ಮಾಡಬೇಕು. ಪ್ರಾರ್ಥನಾಸಮಯದಲ್ಲಿ ಭಗವದ್ಗೀತೆಯಲ್ಲಿ ಹೇಳಿದ ಭಕ್ತಿಯೋಗವನ್ನು ಗಮನದೊಳಗೆ ತಂದುಕೊಳ್ಳಬೇಕು. ಪ್ರಪಂಚಕ್ಕೆಲ್ಲಾ ದೇವರಾದ ಪುರುಷೋತ್ತಮನೇ ಯಜಮಾನ ಎಂದು, ಪರಮಾತ್ಮನಿಗಿಂತ ಅನ್ಯದಾ (ಇತರ) ಯಾರ ಮೇಲೆಯೂ ವಿಧೇಯತೆ ಇಲ್ಲವೆಂದು, ದೇವರ ಮೇಲಿರುವ ಭಕ್ತಿಯೇ ದೇವರ ಅಂಶವಾದ ಭಗವಂತನ ಮೇಲೆ ಸಹ ಇದೆಯೆಂದು, ಸೃಷ್ಟಿಕರ್ತ, ಪರಲೋಕ ರಾಜ್ಯಾಧಿಪತಿಯಾದ ಪರಮಾತ್ಮನೇ ಸರ್ವಲೋಕ ಶಾಸನನೆಂದು, ಆದಿ ಮಧ್ಯ ಅಂತ್ಯಗಳು ಇಲ್ಲದವನು ದೇವರೆಂದು, ದೇವರ ಮೇಲೆ ಪೂರ್ತಿ ಇಷ್ಟತೆ ವಿಶ್ವಾಸ ಹೊಂದಿ ದೇವರೊಳಗೆ ಐಕ್ಯವಾಗುವುದೇ ಪ್ರಾರ್ಥನೆಯಲ್ಲಿನ ಮುಖ್ಯ ಉದ್ದೇಶ.

ಆದರೆ ಪ್ರಸ್ತುತ ಕಾಲದಲ್ಲಿ ಇಂದೂ ಮತ ಹಿಂದೂ ಮತವಾಗಿ ಬದಲಾಗಿ ಏಕೇಶ್ವರೋಪಾಸನ ಸ್ಥಾನದಲ್ಲಿ ಬಹುದೇವತಾರಾಧನೆ ಏರ್ಪಟ್ಟಿದೆ. ಸೂರ್ಯಾಸ್ತಮಯದಿಂದ ರಾತ್ರಿ ಪ್ರಾರಂಭವಾಗುತ್ತಿದೆ. ಸೂರ್ಯಾಸ್ತಮಯ ಮಾನವನ ಅಸ್ತಮಯವನ್ನು ತಿಳಿಸುತ್ತಿದೆ. ಜೀವಿಯ ಅಂತ್ಯ ಮೋಕ್ಷವೆಂದು, ಶರೀರ ಅಂತ್ಯ ಮರಣವೆಂದು ತಿಳಿದು ಆ ಎರಡನ್ನು ತಿಳಿಸುವುದು ಸೂರ್ಯನು ಅಸ್ತಮಿಸುವುದಾದ್ದರಿಂದ ಸೂರ್ಯನು ಅಸ್ತಮಿಸುವ ದಿಕ್ಕಿಗೆ ತಿರುಗಿ ನನ್ನ ಅಸ್ತಮಯ ನಿನ್ನೊಳಗೆ ಐಕ್ಯವಾಗಬೇಕೆಂದು ಕೋರಿಕೆಯಿಂದ ಪ್ರಾರ್ಥನೆ ಮಾಡುವುದನ್ನೇ **ಅಂತ್ಯಪ್ರಾರ್ಥನೆ** ಎನ್ನುತ್ತಿದ್ದೇವೆ. ಅಂತ್ಯಪ್ರಾರ್ಥನೆ ಮೋಕ್ಷಕ್ಕೋಸ್ಕರ ಇರಬೇಕು. ಸುವಿಶಾಲವಾದ ದೇವರಲ್ಲಿ ಸೇರಿ ಕಾಣಿಸದ ಹಾಗೆ ಹೋಗುವಂತಹ ಉದ್ದೇಶವನ್ನು ಹೊಂದಿ ಮಾಡುವುದೇ ಕೊನೆಯ ಪ್ರಾರ್ಥನೆವೊಂದರ ಅರ್ಥ, ಉದ್ದೇಶ. ಮಾನವನ ಗಮ್ಯ ಕೊನೆಗೆ ಮೋಕ್ಷವೇ ಆದ್ದರಿಂದ ಮಂಗಳವಾರವೆ

ಮಾಡುವುದು ನಡೆಯುತ್ತಿದೆ. **ಆದಿ, ಸೋಮ, ಮಂಗಳವಾರಗಳಲ್ಲಿ ಆದಿ, ಮಧ್ಯ, ಅಂತ್ಯಕಾಲಗಳಾದ ಉದಯ, ಮಧ್ಯಾಹ್ನ, ಸಾಯಂಕಾಲಗಳಲ್ಲಿ ಬ್ರಹ್ಮ, ಕರ್ಮ, ಭಕ್ತಿ ಯೋಗಗಳು ಆಚರಿಸುವುದೇ ತ್ರೈತಾರಾಧನೆಯೆಂದು ತಿಳಿಯಬೇಕು.**

**ಆದಿವಾರ – ಉದಯ – ಪೂರ್ವ – ಬ್ರಹ್ಮಯೋಗ**

**ಸೋಮವಾರ – ಮಧ್ಯಾಹ್ನ – ದಕ್ಷಿಣ – ಕರ್ಮಯೋಗ**

**ಮಂಗಳವಾರ – ಸಾಯಂಕಾಲ – ಪಶ್ಚಿಮ – ಭಕ್ತಿಯೋಗ**

ಮೂರು ಯೋಗಗಳಿಂದ, ಮೂರು ದಿನಗಳಲ್ಲಿ, ಮೂರುಕಾಲಗಳಲ್ಲಿ, ಮೂರು ದಿಕ್ಕುಗಳಲ್ಲಿ ದೇವರನ್ನು ಆರಾದಿಸುವುದೇ ತ್ರೈತಾರಾಧನೆ. ತ್ರೈತಾರಾಧನೆ ಪ್ರಬೋಧಸೇವಾ ಸಮಿತಿಯವರೇ ಅಲ್ಲದೆ ಎಲ್ಲರೂ ಆಚರಿಸುವುದು ಒಳ್ಳೆಯದು.

ತ್ರೈತಾರಾಧಕರು ಮುಖ್ಯವಾಗಿ ಪರಮಾತ್ಮನ ಜ್ಞಾನ ಹೊರತು ಅನ್ಯದೇವತ ಆರಾಧನೆ ಬಿಡಬೇಕಾಗಿರುತ್ತದೆ. ತ್ರೈತಾರಾಧನೆ ಮೂರುದಿನಗಳು, ಒಟ್ಟಾರೆ ವಿಶ್ವವನ್ನೇ ಸೃಷ್ಠಿಸಿ ನಡೆಸುವ ಸ್ವಯಂಶಕ್ತಿ ಪರನಾದ ಪರಮಾತ್ಮ ಆರಾಧನೆಯಿಂದ ಕೂಡಿಕೊಂಡಿರುವುದರಿಂದ, ಎಲ್ಲದಕ್ಕಿಂತ ದೊಡ್ಡವ, ಅಸಲಾದ ಸೃಷ್ಠಿಕರ್ತ ದೇವರೆಂದು ತಿಳಿದ ನಂತರ ಇತರ ದೇವತೆಗಳನ್ನು ಆಶ್ರಯಿಸುವುದು ಪರಮಾತ್ಮನನ್ನು ನಾವು ಸರಿಯಾಗಿ ಅರ್ಥ ಮಾಡಿಕೊಂಡಿಲ್ಲವೆಂದು ಅರ್ಥ. ದೇವರ ಶ್ರೇಷ್ಟತ್ವವನ್ನು ತಿಳಿಯದವರೇ ಇತರ ದೇವರುಗಳನ್ನು ಆಶ್ರಯಿಸಬಲ್ಲರು. ಕಾಣಿಸುತ್ತಿದ್ದರೆ ಬಾಗಿನೋಡುವ ಅವಶ್ಯಕತೆ ಇಲ್ಲವಲ್ಲ! ಹಾಗೆಯೇ ದೇವರ ಜ್ಞಾನ ತಿಳಿದಾಗ ಇತರ ದೇವತೆಗಳನ್ನು ಕುರಿತು ಯೋಚಿಸುವುದಿಲ್ಲ ಅಲ್ಲವೆ! ಇತರ ದೇವರುಗಳನ್ನು ಮಾನವನು ಸೃಷ್ಠಿಸಿಕೊಂಡಿರುವುದೆ ಆಗಲಿ ಆ ದೇವರುಗಳು ಸಹ ನಮ್ಮಂತೆ ಜೀವಿಗಳೇ ಎಂದು, ನಾವು ಹುಟ್ಟಿದ ಹಾಗೆ ಅವರೂ ಹುಟ್ಟಿದ್ದಾರೆಂದು ಬಹಳಜನರಿಗೆ ತಿಳಿಯದು. ಪೂರ್ವದಲ್ಲಿ ಹಿರಿಯರು ಪರಮಾತ್ಮನನ್ನು ತಿಳಿಸುವ ಜ್ಞಾನವನ್ನು ತಿಳಿಸುವ ಉದ್ದೇಶಕ್ಕಾಗಿ ದೃಶ್ಯರೂಪವಾದ

ದೇವಾಲಯವನ್ನು ಸೃಷ್ಠಿಸಿದ್ದಾರೆ. ದೇವಾಲಯ ರೂಪನಾಮಗಳು ಪೂರ್ವದಲ್ಲಿ ದೈವಜ್ಞಾನದಿಂದ ತುಂಬಿಕೊಂಡಿರುವವಾಗಿ ಇರುತ್ತಿದ್ದವು. ಕಾಲಕ್ರಮವಾಗಿ ಆ ದಿನದ ಉದ್ದೇಶವೂ, ಜ್ಞಾನವೂ ತಿಳಿಯದಂತೆ ಹೋಗಿರುವುದರಿಂದ ಇತರ ಉದ್ದೇಶಗಳಿಂದ ಮಾನವನು ಅನೇಕ ದೇವರುಗಳನ್ನು ತಯಾರು ಮಾಡಿಕೊಂಡಿದ್ದಾನೆ. ಅರ್ಥವಿಲ್ಲದ ಆಚರಣೆಗಳಲ್ಲಿ ಮುಳುಗಿಹೋಗಿದ್ದಾನೆ. ಇಂತಹ ಆಚಾರಗಳನ್ನು, ಭಕ್ತಿಯನ್ನು, ಭಗವದ್ಗೀತೆಯಲ್ಲಿ ತಾಮಸ ಆಚಾರ, ತಾಮಸಭಕ್ತಿ ಎಂದು ಹೇಳಲ್ಪಟ್ಟಿವೆ. ಖರ್ಚು, ಕಷ್ಟವಿಲ್ಲದ ಪರಮಾತ್ಮ ಆರಾಧನೆಯನ್ನು ಬಿಟ್ಟು ಖರ್ಚು, ಕಷ್ಟವಿರುವ ಅನೇಕ ಇತರ ದೇವತಾರಾಧನೆ ಗಳನ್ನು ಮನುಷ್ಯ ಕಲ್ಪಿಸಿಕೊಂಡಿದ್ದಾನೆ. ದೇವರು ಹೊರತು ಇತರ ದೇವತಾರಾಧನೆ ಮಾಯ ಪ್ರೇರೇಪಣೆಯೆಂದು ತಿಳಿಯದಿರುವುದರಿಂದ ಅವುಗಳಲ್ಲಿ ಸಿಲುಕಿಕೊಂಡು ಪರಮಾತ್ಮ ಜ್ಞಾನಕ್ಕೆ ದೂರವಾಗಿ ಹೋಗುತ್ತಿದ್ದಾರೆ. ಅನ್ಯದೇವತೆಗಳ ಆಲಯಗಳು ಕಟ್ಟಿಸಿದವರು ಮೊದಲುಗೊಂಡು ಆ ದೇವತೆಗಳನ್ನು ಪೂಜಿಸುವವರು ಸಹಿತ ನಮಗಿಂತ ಮಿಗಿಲಾದ ಭಕ್ತನಾಗಲಿ, ನಮಗಿಂತ ಮಿಗಿಲಾದ ಜ್ಞಾನಿಯಾಗಲಿ ಇಲ್ಲವೆಂದು ಅವರ ಮನಸ್ಸಿನಲ್ಲಿ ದೃಢವಾದ ಗೋಡೆ ಕಟ್ಟಿಕೊಂಡಿದ್ದಾರೆ. ಅಂತಹವರಿಗೆ ಪರಮಾತ್ಮ ಜ್ಞಾನ ಹೇಳಿದರೂ ಅವರ ಹದ್ದನ್ನು ದಾಟಿ ಅವರು ಕೇಳುವ ಸ್ಥಿತಿಯಲ್ಲಿ ಇಲ್ಲ.

ಮೋಕ್ಷಾಧಿಪತಿಯಾದ ಪರಮಾತ್ಮನನ್ನು ತಿಳಿಸುವುದಕ್ಕಾಗಿ ಪೂರ್ವದಲ್ಲಿ ಇಂದೂಮತದಲ್ಲಿಯೇ ಏಕೇಶ್ವರೋಪಾಸನ ತಿಳಿಸುವ ಜ್ಞಾನ ಬಯಲ್ಪಟ್ಟಿದೆ. ಇಂದೂಮತದಲ್ಲಿಯೆ ಒಂದೇ ದೇವರ ಉಪಾಸನೆ ತಿಳಿಸುವ ದೇವಾಲಯಗಳು ಸಹ ತಯಾರಾಗಿವೆ.

ಆದರೆ ಪ್ರಸ್ತುತ ಕಾಲದಲ್ಲಿ ಇಂದೂಮತ ಹಿಂದೂಮತವಾಗಿ ಬದಲಾಗಿಹೋಗಿ ಏಕೇಶ್ವರೋಪಾಸನೆ ಸ್ಥಾನದಲ್ಲಿ ಬಹುದೇವತಾರಾಧನೆ ಏರ್ಪಟ್ಟಿದೆ. ಕಾಲಗಮನದಲ್ಲಿ ಪ್ರತ್ಯೇಕಿಸಿ ಯಾವ ಮತವಾಗಲಿ ಇಂದೂಮತದಿಂದ

ಅನೇಕ ಮತಗಳು ಏರ್ಪಟ್ಟಿರುವುದಾದರೂ, ಅವುಗಳಲ್ಲಿ ಬಹುದೇವತಾರಾಧನೆ ಇಲ್ಲದಿರುವುದು ಸಂತೋಷದಾಯಕವಾದರೂ, ಮತಗಳ ಅವಗಾಹನೆ ಅವರಲ್ಲಿ ಇಲ್ಲದಹಾಗೆ ಹೋಗಿ ಪರಮತದ್ವೇಷ ಕೆಲವರಲ್ಲಿ ನಿಂತುಹೋಗಿದೆ. ಇದನ್ನನುಸರಿಸಿ ಯಾರು ಯಾವ ಮತಸ್ಥರಾದರೂ ಅವರಲ್ಲಿ ಇನ್ನೂ ಸ್ವಲ್ಪ ಮಾಯೆ ಕೆಲಸ ಮಾಡುತ್ತಿದೆಯೆಂದೆ ಹೇಳಬಹುದು. ಇಂತಹ ಪ್ರಸ್ತುತ ಕಾಲದಲ್ಲಿ ಯಾವ ಮಾಯೆ ಕೆಲಸಮಾಡದ ವಿಧಾನ, ಎಲ್ಲಾ ಮತಗಳ ಅವಗಾಹನೆ, ಎಲ್ಲರಿಗೂ ಉಳಿದ ದೇವತೆಗಳಿಗು ಸಹಿತ ಅಧಿಪತಿಯಾದ ಪರಮಾತ್ಮನನ್ನು ತಿಳಿಯುವ ಜ್ಞಾನವಿರುವ ಬೋಧನೆಗಳಾಗಲಿ, ಅನುಸರಿಸುವ ವಿಧಾನಗಳಾಗಲಿ ಎಷ್ಟೋ ಅಗತ್ಯ. ಆ ಅಗತ್ಯ ಪೂರೈಸುವಂತೆ **ತ್ರೈತ ಸಿದ್ಧಾಂತ ಬೋಧನೆಗಳು ದೇವರು ನಮಗೆ ತಿಳಿಸಿದ್ದಾನೆ.** ದೇವರು ತಿಳಿಸಿದ ನಿಜವಾದ ಜ್ಞಾನ ಪ್ರಬೋಧ ಸೇವಾ ಸಂಸ್ಥೆಯಲ್ಲಿ ಇರುವುದು ನಮ್ಮ ಅದೃಷ್ಟವಾಗಿ ಭಾವಿಸಿ ಈ ಸಂಸ್ಥೆ ಸದಸ್ಯರು ಇತರರಿಗೆ ಕಣ್ತೆರೆಸುವಹಾಗೆ ಕೆಲವು ಆಚರಣೆಗಳು ಹೊಂದಿರಬೇಕು.

ತ್ರೈತಾರಾಧನೆಯನ್ನು ತ್ರೈತಸಿದ್ಧಾಂತ ತಿಳಿದ ಪ್ರತಿಯೊಬ್ಬರು ಆಚರಿಸಬೇಕು. ಪ್ರಬೋಧಸೇವಾ ಸಮಿತಿಯವರು ತ್ರೈತಾರಾಧನೆ ಮಾಡುತ್ತಾ ತಿಳಿಯದವರಿಗೆ ಸಹ ತಿಳಿಸುವ ಸಾಮರ್ಥ್ಯ ಹೊಂದಿರಬೇಕು. ಈ ಸಂಘದವರು ಪರಮಾತ್ಮ ಜ್ಞಾನ, ಪರಮಾತ್ಮ ಆರಾಧನೆಯಲ್ಲಿ ಹೊರತು ಇತರ ದೇವತೆಗಳ ಆರಾಧನೆಯಲ್ಲಿ ಭಾಗವಹಿಸಬಾರದು. ಸಮೀಪ ಸಂಬಂಧಿಕರು ಕರೆದರು, ಅವರಿಗೆ ಅರ್ಥವಾಗುವಂತೆ ತಮ್ಮ ವಿಧಾನ ತಿಳಿಸಿ ಹೇಳಿ ನಮ್ಮ ಪದ್ಧತಿ ಪ್ರಕಾರ ಹಾಗೆ ಭಾಗವಹಿಸುವುದು ದೈವ ದ್ರೋಹವಾಗುತ್ತದೆಂದು ಹೇಳಬೇಕು. ಪರಮಾತ್ಮನಿಗಾಗಿ ಏನಾದರೂ ಕಷ್ಟಪಡಬಹುದಾಗಲಿ ಇತರ ದೇವತೆಗಳಿಗಾಗಿ ಎಂತಹ ಶ್ರಮವಾಗಲಿ ಪಡಬಾರದು. ಅನ್ಯದೇವತೆಗಳಿಗಾಗಿ ಮಾಡುವ ಪೂಜೆಗಳಲ್ಲಿ ಭಾಗವಹಿಸದೆ ಅಂತಹ ಪೂಜೆ ನಿರ್ವಹಣೆಗಾಗಲಿ, ನಿರ್ಮಾಣ ಗಳಿಗಾಗಲಿ ಎಂತಹ ಚೆಂದಾ ಕೊಡಬಾರದು. ಹಾಗೆ ಕೊಟ್ಟರು ಅಜ್ಞಾನ

ಸಹಿತವಾದ ಪರದೇವತಾರಾಧನೆಯನ್ನು ಪ್ರೋತ್ಸಾಹಿಸಿದಂತಾಗುತ್ತದೆ. ಆದಿ, ಮಧ್ಯಾಂತ ರಹಿತನು ಪರಲೋಕಾಧಿಪತಿಯಾದ ಪರಮಾತ್ಮನನ್ನಾಗಲಿ, ಆತನ ಅಂಶವನ್ನಾಗಲಿ ಆರಾಧಿಸುವ ಆರಾಧನೆಯಲ್ಲಿ ಭಾಗವಹಿಸಬಹುದು. ಅಲ್ಲಿ ಕೊಡುವ ಪ್ರಸಾದವನ್ನು ಮಹಾ ಬಹುಮತಿಯಾಗಿ ಭಾವಿಸಬೇಕು. ಅನ್ಯದೇವತಾ ರಾಧನೆಗಳ ಪ್ರಸಾದಗಳನ್ನು ಯಾರಾದರೂ ಕೊಟ್ಟರು ತಿನ್ನುವ ಪದಾರ್ಥದಂತೆ ಭಾವಿಸಬೇಕು. ಪ್ರತಿದಿನ ತಾನು ಸ್ವತಃ ಸ್ವಲ್ಪ ತ್ರೈತ ಜ್ಞಾನವನ್ನು ತಿಳಿದುಕೊಳ್ಳುವು ದಾಗಲಿ, ಕೈಲಾದರೆ ಪ್ರತಿದಿನ ಕೆಲವರಿಗಾದರು ತ್ರೈತಜ್ಞಾನವನ್ನು ತಿಳಿಸುವುದಾಗಲಿ ಮಾಡಬೇಕು. ತ್ರೈತಾರಾಧನೆ ಮಾಡುವ ಮೂರು ದಿನಗಳಲ್ಲಿಯು ಪವಿತ್ರವಾಗಿರುವು ದಕ್ಕೆ ಅಭ್ಯಾಸಮಾಡಿಕೊಳ್ಳಬೇಕು. ಆ ಮೂರು ದಿನಗಳಲ್ಲಿ ಕಠಿಣವಾಗಿ ಮಾತನಾಡು ವುದು, ದೂಷಿಸುವುದು ಬಿಡಬೇಕು. ತ್ರೈತಾರಾಧನೆಯಲ್ಲಿ ಎಲ್ಲರೂ ಬಿಳಿ ವಸ್ತ್ರಗಳು ಧರಿಸಬೇಕು. ಬಿಳಿ ಜ್ಞಾನಚಿಹ್ನೆಯಾದ ಚಂದ್ರನ ಬಣ್ಣ. ಎಲ್ಲರೂ ಬಿಳಿಯ ಬಣ್ಣವನ್ನು ಧರಿಸುವುದು ಕ್ರಮಶಿಕ್ಷಣವನ್ನು ತಿಳಿಸುತ್ತದೆ. ತ್ರೈತ ಸಂಘದಲ್ಲಿ ಯಾರು ಮರಣಿಸಿದರು ಪೂರ್ವದ ಆಚಾರದಂತೆ ಆ ಶವವನ್ನು ಶಿವವಾಗಿ ಭಾವಿಸಿ ಎಲ್ಲರೂ ಶರೀರ ಅಂತ್ಯಕ್ರಿಯೆಯಲ್ಲಿ ಪಾಲ್ಗೊಳ್ಳಬೇಕು. ತ್ರೈತಜ್ಞಾನದ ಪ್ರಕಾರ "ಶ್ರೀಮತ" (ಶ್ರೀಮಂತ)" ಜ್ಞಾನಹೊಂದಿದ ಸ್ತ್ರೀಯರಿಗೆ ಮಾತ್ರವೆ ಮಾಡಬೇಕು. ಮರಣಿಸಿದವನು ಜನ್ಮಗಳಿಗೆ ಹೋದಂತಾದರೆ ಅವನಿಗೆ ಪಿಂಡಕೂಳು ಇಡಬಾರದು. ಮರಣಿಸಿದವನು ಮೋಕ್ಷ ಹೊಂದಿದಂತಾದರೆ ಅವನಿಗೆ ತಪ್ಪದೆ ಪಿಂಡಕೂಳು ಇಡುವ ಕಾರ್ಯವನ್ನು ಭಾವಪೂರಿತವಾಗಿ ಮಾಡಬೇಕು. ಮೃತದೇಹಕ್ಕೆ ಶಿವಪೂಜೆ ಮಾಡುವಾಗ, ಹಾಗೆಯೇ ಮೋಕ್ಷ ಹೊಂದಿದವನಿಗೆ ಪಿಂಡಕೂಳು ಇಡುವ ಸಮಯದಲ್ಲಿಯು ತ್ರೈತವನ್ನು ಅಂದರೆ ಮೂರು ಆತ್ಮಗಳನ್ನು ತಿಳಿಸುವ ಬಿಳಿವಸ್ತ್ರವನ್ನು ತಲೆಮೇಲೆ ಧರಿಸಬೇಕು. ಬಹುಶ ಪಿಂಡಕೂಳು ಕಾರ್ಯ ಬಹಳ ಅಪರೂಪವಾಗಿ ನಡೆಯುತ್ತದಾದ್ದರಿಂದ ಈ ಕೆಲಸ ಇಲ್ಲದಿರಬಹುದಾಗಲಿ ಶಿವವನ್ನು ಮಾತ್ರ ತಲೆಮೇಲೆ ವಸ್ತ್ರ ಧರಿಸಿಯೇ ತಾಕಬೇಕು. ಪಿಂಡಕೂಳನ್ನು ಕುರಿತಾಗಲಿ, ಶವವನ್ನು ಶಿವವಾಗಿ ನೋಡುವುದಾ

ಗಲಿ, ಶ್ರೀಮಂತವನ್ನು ಕುರಿತಾಗಲಿ ಇತರರಿಗೆ ತಿಳಿಹೇಳುವುದು ಮತ್ತು ತ್ರೈತ ಆರಾಧನೆಯನ್ನು ಕುರಿತು ಹೇಳುವುದು ಸಾಧ್ಯ ಇರುವವರೆಗೂ ಮಾಡಬೇಕು. ಪ್ರಬೋಧ ಸೇವಾ ಸಮಿತಿಯವರು ನಿತ್ಯವೂ ಜ್ಞಾನ ತಿಳಿದುಕೊಳ್ಳುವುದಕ್ಕು ಮತ್ತು ತಿಳಿಸಿಹೇಳುವುದಕ್ಕು ಸ್ವಲ್ಪ ಕಾಲವನ್ನು ನಿಗಧಿಸಿಕೊಂಡಂತೆ, ದೇವರಿಗೋಸ್ಕರ ಒಂದು ಗಂಟೆಯಾಗಲಿ ಇಲ್ಲವೆ ಅರ್ಧಗಂಟೆಯಾಗಲಿ ಕೆಲಸ ಮಾಡುವಂತೆ ಏರ್ಪಾಟು ಮಾಡಿಕೊಳ್ಳಬೇಕು. ಹಾಗೆ ಮಾಡಿದಾಗ ಬಂದಿರುವ ಹಣವನ್ನು ದೇವರ ಕೆಲಸಕ್ಕೆ ಉಪಯೋಗಿ ಸಬೇಕು. ಪ್ರಬೋಧ ಸೇವಾ ಸಂಸ್ಥೆಯಲ್ಲಿ ನಿಜವಾದ ಜ್ಞಾನವಿದೆಯೆಂದು ಇತರರಿಗೆ ತಿಳಿಯವಹಾಗೆ ನಡೆದುಕೊಳ್ಳಬೇಕು.

ಭೂಮಿಮೇಲೆ ಧರ್ಮಗಳು ಅಧರ್ಮಗಳಾಗಿ ಬದಲಾಗುತ್ತವೆಂದು ಭಗವದ್ಗೀತೆಯಲ್ಲಿ ದೇವರು ತಿಳಿಸಿದಂತೆ ಪೂರ್ವದಲ್ಲಿ ಎಷ್ಟೋ ಪವಿತ್ರವಾಗಿರುವ ಆದಿ, ಸೋಮ, ಮಂಗಳ ವಾರಗಳು ಪ್ರಸ್ಥುತ ಕಾಲದಲ್ಲಿ ಅಪವಿತ್ರವಾಗಿ ಬದಲಾಗಿಹೋಗಿವೆ. ಹಾಗೆಯೇ ಯಾವ ಪವಿತ್ರತೆಯಿಲ್ಲದ ಉಳಿದ ನಾಲ್ಕು ದಿನಗಳು ಪವಿತ್ರವಾಗಿ ಲೆಕ್ಕಿಸಲ್ಪಡುತ್ತಿವೆ. ವಿವರವಾಗಿ ನೋಡಿದರೆ ಎಲ್ಲಾ ವಿಧಗಳಲ್ಲಿ ಕೆಟ್ಟುಹೋದವನನ್ನು ಇವನು ಶನಿ ಹಿಡಿದವನೆಂದು ಅನ್ನುತ್ತಿದ್ದೇವೆ. ಎಲ್ಲಾ ವಿಧಗಳ ಕೆಡಕಿಗೆ ಶನಿ ಅಧಿಪತಿ ಎಂದು ಎಲ್ಲರಿಗೂ ತಿಳಿದಂತೇ ಇದೆ. ಶನಿ ದಿನವಾದ ಶನಿವಾರ ಪೂರ್ವದಲ್ಲಿ ಪವಿತ್ರತೆ ಇಲ್ಲದ ದಿನವಾಗಿಯೇ ಲೆಕ್ಕಿಸುತ್ತಿದ್ದರು. ಹಾಗೆಯೇ ವಸ್ತು, ವಾಹನ, ವಿಲಾಸಗಳಿಗೆ, ಶೃಂಗಾರಕ್ಕೆ ಅಧಿಪತಿಯಾದ ಶುಕ್ರನೊಂದರ ಶುಕ್ರವಾರವನ್ನು, ಪ್ರಪಂಚ ದೇವತೆಗಳಿಗೆ ಗುರುವಾಗಿದ್ದೂ ಪ್ರಪಂಚ ಜ್ಞಾನಕ್ಕೆ ಅಧಿಪತಿಯಾಗಿದ್ದು ಪ್ರಪಂಚಜ್ಞಾನದ ಮೇಲೆ ಮನುಷ್ಯರನ್ನು ಲಗ್ನ ಮಾಡುವ ಗುರುಗ್ರಹ ಒಂದರ ದಿನವಾದ ಗುರುವಾರವನ್ನು, ಮಂತ್ರ ತಂತ್ರಗಳಿಗು, ಭೂತಪ್ರೇತ ಪಿಶಾಚಗಳಿಗು ತಾಂತ್ರಿಕ ವಿದ್ಯೆಗಳಿಗು ಅಧಿಪತಿಯಾದ ಬುಧನೊಂದರ ದಿನವಾದ ಬುಧವಾರವನ್ನು ಪರಮಾತ್ಮ ಜ್ಞಾನ ತಿಳಿದವರು ಯಾವಮಾತ್ರ ಪವಿತ್ರ ದಿನವಾಗಿ ಭಾವಿಸುವವರಲ್ಲ. ಜ್ಞಾನದ ಪ್ರಕಾರ ಮೊದಲ ಮೂರು

ದಿನಗಳಾದ ಆದಿ, ಸೋಮ, ಮಂಗಳ ವಾರಗಳನ್ನೇ ಪವಿತ್ರವಾಗಿ ನೋಡಿ ಕೊಳ್ಳುತ್ತಿದ್ದರು. ಪ್ರಸ್ತುತ ಕಾಲದಲ್ಲಿ ಕೊನೆಯ ಮೂರು ದಿನಗಳಾದ ಗುರು, ಶುಕ್ರ, ಶನಿವಾರಗಳು ಪವಿತ್ರವಾಗಿ ಬದಲಾಗಿಹೋಗುವುದು, ಮೊದಲ ಮೂರು ದಿನಗಳಾದ ಆದಿ, ಸೋಮ, ಮಂಗಳವಾರಗಳು ಅಪವಿತ್ರವಾಗಿ ಬದಲಾಗಿ ಹೋಗುವುದು ನಡೆದಿದೆ.

ಎಲ್ಲಾ ವಿಧಗಳ ಭ್ರಷ್ಟು ಹಿಡಿದವನಿಗೆ ಬದಲು ಹೆಸರಾಗಿ ಹೇಳುವ ಶನಿವಾರವನ್ನು, ಎಲ್ಲಾ ದರಿದ್ರಗಳಿಗು ಗುರುತಾಗಿ ಹೇಳುವ ಶನಿವಾರವನ್ನು ಯಾವ ಜ್ಞಾನವಿಲ್ಲದವರು ಸಹ ಪವಿತ್ರವಾಗಿ ಪರಿಗಣಿಸುತ್ತಿದ್ದಾರೆ. ಬಹಳ ಜನ ಶನಿವಾರ ಮನೆ ಬಾಗಿಲು ಶುಭ್ರಮಾಡಿಕೊಂಡು ಕೆಲವರು ದೇವತೆಗಳಿಗೆ ಪ್ರತ್ಯೇಕವಾಗಿ ಪೂಜೆಗಳು ಮಾಡುತ್ತಿದ್ದಾರೆ. ಶನಿವಾರ ಶುಚಿ ಶುಭ್ರವನ್ನು ಪಾಟಿಸುತ್ತಾ ತಲೆಸ್ನಾನ ಮಾಡಿ ಮಾಂಸವಾಗಲಿ, ಮೀನುಗಳನ್ನಾಗಲಿ ಮನೆಯೊಳಗೂ ತೆಗೆದುಕೊಂಡು ಬಾರದೆ ಪವಿತ್ರ ದಿನವಾಗಿ ಭಾವಿಸುತ್ತಿದ್ದಾರೆ. ಜ್ಞಾನಸಂಬಂಧವಾಗಿ ಎಂತಹ ಪ್ರತ್ಯೇಕತೆ ಇಲ್ಲದ ದಿನವನ್ನು ಮತ್ತು ದರಿದ್ರಗಳಿಗೆ ಬದಲು ಹೆಸರಾದ ಶನಿವಾರದಿನವನ್ನು ಈ ಕಾಲದಲ್ಲಿ ಪವಿತ್ರವಾಗಿ ನೋಡುವುದು, ಎಲ್ಲಾ ವಿಧಗಳ ಜ್ಞಾನ ವಿವರದಿಂದ ಕೂಡಿಕೊಂಡ ಭಾನುವಾರವನ್ನು ಅಪವಿತ್ರ ಕೆಲಸಗಳಿಗೆ ಬಳಸಿಕೊಳ್ಳುವುದು ನೋಡಿದರೆ ಧರ್ಮ ಅಧರ್ಮವಾಗಿ ಬದಲಾಗಿದೆ ಎಂದು ಹೇಳದೆ ಇರಲಾರೆವು. ಹಾಗೆಯೇ ಯಾವ ಜ್ಞಾನಸಂಬಂಧ ವಿಷಯಗಳು ಇಲ್ಲದಿರುವುದು, ಪ್ರಪಂಚ ಸಂಬಂಧವಾದ ಧನ, ಕನಕ, ವಸ್ತು, ವಾಹನ, ಭೋಗಭಾಗ್ಯ, ಶೃಂಗಾರ ವಿಷಯಗಳಿಗೆ ನಿಲಯವಾದ ಶುಕ್ರಗ್ರಹ ದಿನವಾದ ಶುಕ್ರವಾರ ಸಹ ಲಕ್ಷ್ಮಿವಾರವೆಂದು, ಹಣದ ದಿನವೆಂದು, ಹಣಕ್ಕೋಸ್ಕರ ಪೂಜೆಗಳು ನಿರ್ವಹಿಸುತ್ತಾ, ಉಪವಾಸಗಳು ಇರುತ್ತಾ ಪವಿತ್ರವಾಗಿ ಕಳೆಯುವುದು ನೋಡುತ್ತಲೇ ಇದ್ದೀರ. ಗುರುವಾರ ಸಹ ಸಾಯಿಬಾಬ ಭಕ್ತರು, ರಾಘವೇಂದ್ರ ಸ್ವಾಮಿ ಭಕ್ತರು ಶುಚಿ ಶುಭ್ರತೆಗಳಿಂದ ಪವಿತ್ರವಾಗಿ ಪೂಜೆಗಳು ಮಾಡುವುದು

ಸಹ ನೋಡುತ್ತಿದ್ದೇವೆ. ಈ ವಿಧವಾಗಿ ವಾರಕ್ಕೆ ಕೊನೆಯವಾದ ಗುರು, ಶುಕ್ರ, ಶನಿ ಮೂರು ದಿನಗಳನ್ನು ಪವಿತ್ರವಾಗಿ ನೋಡುವುದು, ಮೊದಲ ಆದಿ, ಸೋಮ, ಮಂಗಳ ಮೂರು ದಿನಗಳನ್ನು ಅಪವಿತ್ರ ಕಾರ್ಯಗಳಿಗೆ ಬಳಸಿಕೊಳ್ಳುತ್ತಾ ಅವುಗಳಿಗೆ ಪ್ರಾಧಾನ್ಯತೆ ಕೊಡದೆ ಹೋಗುವುದು ಬಹಳ ಗಮನಿಸಬೇಕಾದ ವಿಷಯ. ಇದರಿಂದ ಕಾಲಗರ್ಭದಲ್ಲಿ ಎಷ್ಟೋ ಧರ್ಮಗಳು ಅಧರ್ಮಗಳಾಗಿ, ಅಧರ್ಮಗಳು ಧರ್ಮಗಳಾಗಿ ಮಾರ್ಪಟ್ಟಿವೆಯೆಂದು ಅರ್ಥವಾಗುತ್ತಿದೆ. ಪರಮಾತ್ಮ ಜ್ಞಾನಕ್ಕೆ ಅವರೋಧಗಳಾದ ಅಧರ್ಮಗಳನ್ನು ಇಲ್ಲದಹಾಗೆ ಮಾಡಿಕೊಂಡು, ದೇವರ ಧರ್ಮಗಳನ್ನು ಪ್ರಚಾರಮಾಡಿ ಅವುಗಳನ್ನು ಆಚರಿಸುವುದು ನಮ್ಮ ಕರ್ತವ್ಯ. ಅಧರ್ಮಗಳನ್ನು ಇಲ್ಲದಹಾಗೆ ಮಾಡಿ ಧರ್ಮಗಳನ್ನು ನೆಲೆಗೊಳಿಸುವುದಕ್ಕೆ ಸೃಷ್ಠಿಕರ್ತನಾದ ದೇವರೇ ಮಾನವನಾಗಿ ಬಂದು ಎಷ್ಟೋ ಶ್ರಮಗಳು, ಬಾಧೆಗಳು, ಅವಮಾನಗಳನ್ನು ಅನುಭವಿಸಿದ್ದಾನೆ. ಮಾನವರಾದ ನಾವು ಈಗ ಧರ್ಮಗಳನ್ನು ಧರ್ಮಗಳಾಗಿ, ಅಧರ್ಮಗಳನ್ನು ಅಧರ್ಮಗಳಾಗಿ ತೋರಿಸಿ ಹೇಳಿದರೆ ಅಧರ್ಮಗಳಿಗೆ ಅಭ್ಯಾಸವಾದ ಮನುಷ್ಯರ ಮೂಲಕ ಸ್ವಲ್ಪ ತೊಂದರೆ ತಪ್ಪುವುದಿಲ್ಲ. ವಿಷಯದಲ್ಲಿನ ಸತ್ಯ ತಿಳಿದು ಹೇಳದೆ ಹೋದರೆ ತನ್ನೊಳಗಿನ ದೈವ ಪ್ರತಿನಿಧಿಯಾದ ಆತ್ಮಕ್ಕೆ ದ್ರೋಹ ಮಾಡಿದಂತಾಗುತ್ತದೆ. ತಿಳಿದು ಹೇಳಿದರೆ ಇತ್ತ ಅಜ್ಞಾನ ಪ್ರಜೆಗಳಿಗು ಅಯಿಷ್ಟತೆ ಏರ್ಪಡುತ್ತದೆ. ಹೇಳದೇ ಹೋದರೆ ಅತ್ತ ಆತ್ಮದ್ರೋಹವಾಗುತ್ತದೆ. ಆದಿವಾರ ಮನೆ, ದೇಹ ಶುಭ್ರವಾಗಿಟ್ಟುಕೊಂಡು ಮಾಂಸ ತಂದುಕೊಳ್ಳದೆ ಪವಿತ್ರವಾಗಿ ಕಳೆಯಿರೆಂದರೂ, ಶನಿವಾರ ಮಾಂಸ ತಿನ್ನಬಹುದೆಂದರೂ ಜ್ಞಾನ ತಿಳಿಯದವರಿಗೆ ಬಹಳ ವಿರುದ್ಧವಾಗಿ ಇರುತ್ತದೆ. ದೈವಮಾರ್ಗದಲ್ಲಿ ಎಂತಹ ಕಷ್ಟಗಳನ್ನಾದರೂ ಎದುರಿಸಬೇಕೆಂದು, ಅದರಿಂದ ದೇವರಿಗೆ ಹತ್ತಿರವಾಗುತ್ತೇ ವೆಂದು ತಿಳಿದು ಪ್ರತಿ ಮನುಷ್ಯ ಧರ್ಮಗಳನ್ನೇ ಪ್ರಚಾರಮಾಡಿ ಅಧರ್ಮಗಳನ್ನು ಇಲ್ಲದಹಾಗೆ ಮಾಡುವುದಕ್ಕೆ ಪ್ರಯತ್ನಿಸಬೇಕು.

ಪೂರ್ವದಲ್ಲಿ ಇಂದೂಮತವು ಎಷ್ಟೋ ಜ್ಞಾನೋನ್ನತೆ ಹೊಂದಿರುತ್ತಿತ್ತು. ಜ್ಞಾನ ಸಂಪನ್ನದೇಶವಾದ್ದರಿಂದ ಭಾರತದೇಶವನ್ನು ಇಂದೂದೇಶವೆಂದು ಸಹ ಕರೆಯುತ್ತಿದ್ದರು. ಪೂರ್ವದಲ್ಲಿ ಮೂರು ದಿನಗಳು ತ್ರೈತಾರಾಧನೆ ಸಕ್ರಮವಾಗಿ ನಡೆಯುತ್ತಿತ್ತು. ಆದಿನ ಸಾಮೂಹಿಕ ತ್ರೈತಾರಾಧನೆ ಈದಿನ ಇಸ್ಲಾಂಮತದಲ್ಲಿ ಮಸೀದ್‌ನಲ್ಲಿ ನಡೆಯುವ ಪ್ರಾರ್ಥನೆಗಳಂತಿರುತ್ತಿತ್ತು. ಪ್ರತಿಯೊಬ್ಬರು ಪ್ರಾರ್ಥ ನೆಯಲ್ಲಿ ಪಾಲ್ಗೊಳ್ಳುತ್ತಿದ್ದರು. ಅಂತಹ ಇಂದೂಗಳ ಆರಾಧನೆ ಈದಿನ ಸ್ವಲ್ಪವಾದರೂ ಕಾಣಿಸದಂತೆ ಹೋಗಿದೆ. ಪೂರ್ವದಲ್ಲಿ ಎಷ್ಟೋ ಅರ್ಥಸಹಿತವಾಗಿ ಮಾಡುವ ಜ್ಞಾನ ಆರಾಧನೆ ಇಲ್ಲದಂತೆಹೋಗಿದೆ. ಅದೇ ರೀತಿಯನ್ನು ಹೋಲಿದ ಪ್ರಾರ್ಥನೆಗಳು ಇಸ್ಲಾಂ ಸ್ಥಾಪನೆಯಲ್ಲಿ ಮುಸ್ಲೀಮರಲ್ಲಿವೆ. ಎಷ್ಟೋ ವಿಶ್ವಾಸ, ದೇವರಬಗ್ಗೆ ವಿಧೇಯತೆ, ಪ್ರವಕ್ತರ ಮಾತು ಮೀರದ ಕ್ರಮಶಿಕ್ಷಣ ಇಸ್ಲಾಂ ಮತದಲ್ಲಿ ಇರುವುದು ಸಂತೋಷಪಡುವ ವಿಷಯವೇ ಆದರು ಪೂರ್ವಕಾಲವೇ ಎಷ್ಟೋ ಜ್ಞಾನೋನ್ನತವಾದ ಇಂದೂಮತದಲ್ಲಿ ಈದಿನ ಅಜ್ಞಾನ ಸ್ಥಳಮಾಡಿ ಕೊಂಡು ಅನೇಕ ಅನ್ಯದೇವತೆಗಳ ಆರಾಧನೆಗಳಿಗೆ ಅಭ್ಯಾಸವಾಗಿ ತಮ್ಮದಾದ ತ್ರೈತಾರಾಧನೆಯನ್ನು ಮರೆತುಹೋಗುವುದು ವಿಚಾರಿಸಬೇಕಾದ ವಿಷಯ. ಈಗಲಾದರೂ ತಮ್ಮ ತಪ್ಪನ್ನು ಗ್ರಹಿಸಿ ಹಿಂದೆ ಹುಟ್ಟಿದ ಇಸ್ಲಾಂ ಮತದಲ್ಲಿನವರ ಆರಾಧನೆ (ನಮಾಜು) ಯನ್ನು ನೋಡಿ, ಬಹಳಮುಂದೆ ಹುಟ್ಟಿದ ನಮಗೆ ಎಷ್ಟೋ ಜ್ಞಾನವಿವರದಿಂದಿರುವ ಆರಾಧನೆ ಇದೆಯೆಂದು ಗ್ರಹಿಸಿ, ತ್ರೈತಾರಾಧನೆ ವಿವರವನ್ನು ನಾವು ತಿಳಿದುಕೊಂಡು ಇತರರಿಗೆ ತಿಳಿಸಿ, ಆಚರಿಸಿ ಇತರರನ್ನು ಆಚರಿಸುವಂತೆ ಮಾಡಬೇಕು. ಇಂದೂ ಆದ ಪ್ರತಿಯೊಬ್ಬರು ಇಲ್ಲಿಯವರೆಗು ತಿಳಿಯದ ತ್ರೈತಾರಾಧನೆಯನ್ನು ತಿಳಿಯಬೇಕು. ಇಲ್ಲಿಯವರೆಗು ಇತರ ಗುರುಗಳು, ಇಂದೂಮತದಲ್ಲಿನ ಜ್ಞಾನವನ್ನು ಬೋಧಿಸುವ ಸ್ವಾಮಿಗಳು ಯಾರೂ ಈ ವಿಷಯವನ್ನು ಹೇಳಲಿಲ್ಲವೆ ಎಂದು ನಮ್ಮನ್ನು ಪ್ರಶ್ನಿಸದೆ ಎಷ್ಟು ಜನ ಸ್ವಾಮಿ ಗಳಿದ್ದರೂ, ಜ್ಞಾನ ತಿಳಿಯದೆ ಹೋದರೆ ಪ್ರಯೋಜನ ಇಲ್ಲವೆಂದು ತಿಳಿದು ಇತರ ಮತಗಳ ಮುಂದೆ ಧೈರ್ಯವಾಗಿ ನಿಲ್ಲಿಸುವಂತಹ ತ್ರೈತಾರಾಧನೆ ಯನ್ನು

ಮಾಡಿರಿ, ಗಂಡಸುತನ ಇಲ್ಲದ ಪುರುಷನು ಹೆಂಡತಿಯನ್ನು ಎಷ್ಟು ಚೆನ್ನಾಗಿ ನೋಡಿಕೊಂಡರು ಹೆಣ್ತನವಿರುವ ಸ್ತ್ರೀಗೆ ಅಸಂತೃಪ್ತಿಯೇ ಇರುತ್ತದಂತೆ. ಹಾಗೆಯೇ ಪುರುಷತ್ವವನ್ನು (ದೈವತ್ವವನ್ನು) ತಿಳಿಸಲಾರದ ಗುರು ಎಷ್ಟು ಚೆನ್ನಾಗಿ ಬೋಧಿಸಿದರು ಹೆಣ್ತನ (ಮಾಯತತ್ವ) ವಿರುವವನಿಗೆ ಅಸಂತೃಪ್ತಿಯೆ ಉಳಿದಿರುತ್ತದೆ. ಆದ್ದರಿಂದಲೆ ಈಗಿನ ಕಾಲದಲ್ಲಿ ಒಬ್ಬವ್ಯಕ್ತಿ ಎಷ್ಟೋ ಜನ ಗುರುಗಳನ್ನು ಆಶ್ರಯಿಸುವುದು ನಡೆಯುತ್ತಿದೆ. ಆಗಲೂ ಸಹ ಅವನಿಗೆ ತಿಳಿಯಬೇಕಾಗಿರುವುದು ತಿಳಿಯುತ್ತಿಲ್ಲ. ಈಗಲಾದರೂ ಮೀರಿ ಹೋಗಿರುವುದು ಏನೂ ಇಲ್ಲ. ಗುರುಗಳ ಭ್ರಮೆಗಳನ್ನು ಬಿಟ್ಟು ಎಲ್ಲರಿಗೂ **"ಜಗತ್ ಗುರುವು"** ಎನ್ನುವವನು ಒಬ್ಬನು ಇದ್ದಾನೆಂದು ತಿಳಿದು ಅವನನ್ನು ಅನ್ವೇಷಿಸುವ ಉದ್ದೇಶದಿಂದ ಈ ತ್ರೈತಾರಾಧನೆ ಆಚರಿಸುತ್ತಾ ಇಂದೂಗಳ ಆರಾಧನೆ ಹೀಗಿರುತ್ತದೆಂದು ತಿಳಿಯವಹಾಗೆ ಮಾಡಬೇಕು. **ನೀನು ನಿಜವಾದ ಇಂದೂವಾದರೆ ನಿನ್ನ ಮುಖದಲ್ಲಿ ಬೋಟ್ಟು, ನಾಮಗಳಿಗಿಂತ ಮುಖ್ಯ ಆದಿ, ಸೋಮ, ಮಂಗಳವಾರಗಳ ಆರಾಧನೆ, ಮೂರು ದಿನಗಳು, ಮೂರು ದಿಕ್ಕುಗಳಲ್ಲಿ, ಮೂರು ಯೋಗಗಳಿಂದ, ಮೂರು ಲೋಕದವರಿಗೆ ತಿಳಿಯುವ ಹಾಗೆ ಮೂರು ಆರಾಧನೆಗಳು ಮಾಡಿ ಇಂದೂ ಅನ್ನುವ ಪದಕ್ಕೆ ಬೆಲೆಯನ್ನು, ಅರ್ಥವನ್ನು ಕೈಗೂಡಿಸಬೇಕೆಂದು ಕೋರುತ್ತಿದ್ದೇವೆ. ಈಗಲಾದರೂ ಪ್ರತಿದಿನ ಇಂದೂವಾಗಿ ಹುಟ್ಟಿ, ಇಂದೂವಾಗಿ ಬದುಕಿ, ಇಂದೂವಾಗಿ ಮರಣಿಸೆಂದು ತಿಳಿಸುತ್ತಿದ್ದೇವೆ.**

**ಅಸತ್ಯವನ್ನು ಸಾವಿರಜನ ಹೇಳಿದರೂ ಅದು ಸತ್ಯ ಅಲ್ಲ.**
**ಸತ್ಯವನ್ನು ಸಾವಿರಜನ ಅಲ್ಲವೆಂದರೂ ಅದು ಅಸತ್ಯ ಅಲ್ಲ.**



ಪ್ರಮುಖರ ಲೇಖೆ



# ಇಂದೂ ದೇಶವೇ ಇಂಡಿಯಾ!

ಹಿಮಾಲಯಗಳಿಗೂ, ವಿಂಧ್ಯ ಪರ್ವತಗಳಿಗೂ ಮಧ್ಯದಲ್ಲಿ ಆದಿನದ ಆರ್ಯಾವರ್ತನ (ಆರ್ಯರ ಭೂಭಾಗ) ಎಲ್ಲಿ ಇದೆಯೋ ನಮ್ಮ ದೇಶಪಟದಲ್ಲಿ ನೀನು ನೋಡಿದ್ದೀಯ. ಅದು ಬಾಲ ಚಂದ್ರಾಕಾರದಲ್ಲಿ ಇರುವಂತೆ ಕಾಣಿಸುತ್ತದೆ. ಅದಕ್ಕೇ ಆರ್ಯಾವರ್ತನಕ್ಕೆ ಇಂದೂ ದೇಶವೆಂದು ಹೆಸರು ಬಂದಿದೆ. ಇಂದೂ ದೇಶವೇ ಹಿಂದೂ ದೇಶವಾಗಿ ಮಾರ್ಪಾಟಾಗಿದೆ.

ರಾಮಯಣ ಹುಟ್ಟಿದ ದೀರ್ಘ ಕಾಲಕ್ಕೆ ಮಹಾಭಾರತ ಹುಟ್ಟಿದೆ. ಅದು ರಾಮಾಯಣಕ್ಕಿಂತ ದೊಡ್ಡ ಗ್ರಂಥ. ಅದರಲ್ಲಿ ಹೇಳಿರುವುದು ಆರ್ಯ ದ್ರಾವಿಡ ಯುದ್ಧವಲ್ಲ. ಆರ್ಯರ ಮಧ್ಯ ಏರ್ಪಟ್ಟ ಕುಟುಂಬ ಕಲಹವೇ ಭಾರತಕಥೆ. ಭಾರತದಲ್ಲಿ ಹೇಳಿದ ಕಥೆಗಳು, ಧರ್ಮಗಳು ಅಷ್ಟಿಷ್ಟಲ್ಲ. ಅವು ಬಹಳ ಸುಂದರವಾಗಿ, ಗಂಭೀರವಾಗಿ ಇರುತ್ತವೆ. ಇವೆಲ್ಲವುಗಳಿಗಿಂತ ದೊಡ್ಡದಾದ ಭಗವದ್ಗೀತೆ ಎಂಬ ಮಹಾಗ್ರಂಥ ಮಹಾಭಾರತದಲ್ಲಿ ಇರುವ ಕಾರಣದಿಂದ ಅದು ನಮ್ಮೆಲ್ಲರಿಗೂ ಪ್ರಿಯತಮ ವಾದದ್ದಾಗಿದೆ. ಸಾವಿರ ವರ್ಷಗಳ ಕೆಳಗೇ ನಮ್ಮ ದೇಶದಲ್ಲಿ ಇಂತಹ ವಿಶೇಷವಾದ ಗ್ರಂಥಗಳು ಹುಟ್ಟಿವೆ. ಮಹಾನುಭಾವರೇ ಇವುಗಳನ್ನು ಬರೆದಿರುತ್ತಾರೆ. ಈ ಗ್ರಂಥಗಳು ಹುಟ್ಟಿ ಇಷ್ಟು ಕಾಲ ಕಳೆದರೂ ಅವುಗಳನ್ನು ಕುರಿತು ತಿಳಿದುಕೊಳ್ಳದಂತಹ ಮಕ್ಕಳು ಮತ್ತು ಪ್ರಯೋಜನವನ್ನು ಪಡೆಯದ ಹಿರಿಯರಂತೂ ಇರುವುದಿಲ್ಲ.

ನೆಹ್ರೂ ಇಂದಿರಗೆ ಬರೆದ ಲೇಖನೆಯಿಂದ

# ಇಂದೂ– ಹಿಂದೂ

**ಇಂದೂ = ಚಂದ್ರನು = ಜ್ಞಾನಿ**
**ಹಿಂದೂ = ಅರ್ಥರಹಿತ = ಜ್ಞಾನವಿಲ್ಲದ** } ಪ್ರಬೋಧಾನಂದ ಯೋಗೀಶ್ವರರು

**ಹಿಂದೂ = ಕಳ್ಳ = ದಯಾನಂದ ಸರಸ್ವತಿ (ಗುರೂಜೀ ಸಮಗ್ರ ಗ್ರಂಥಾವಲಿ)**

**ಹಿಂದೂ=ಬೇವಕೂಫ್=ನೃಸಿಂಹಾನಂದ ಭಾರತಿ (ಹೈಂದವ ಶಂಖಾರಾವಮು)**

- ▶ ಚಿನಜೀಯರ್ ಮುಂತಾದ ಬಹಳ ಮಂದಿ ಸ್ವಾಮೀಜಿಯರು ಹಿಂದೂ ಶಬ್ದವನ್ನು ಬಳಸಬಾರದೆಂದಿದ್ದಾರೆ. ಆ ಪದವನ್ನು ಬಳಸಿದರೇ ನಮ್ಮ ತಲೆಯನ್ನು ನಾವೇ ಕಡೆದುಕೊಂಡಂತೆ ಎಂದು ತಮ್ಮ ಉಪನ್ಯಾಸಗಳಲ್ಲಿ ಹೇಳಿದ್ದಾರೆ. ಬಹಳ ಮಂದಿ ಸ್ವಾಮೀಜಿಯರು ಈ ಶಬ್ದವನ್ನು ವಿದೇಶೀಯರಾದ ಮುಸ್ಲೀಮ್‌ರು ನಮಗೆ ಅತ್ತಗಟ್ಟುತ್ತಿದ್ದಾರೆ. ಅವರ ಭಾವದಲ್ಲಿ ಹಿಂದೂ ಎಂದರೇ ಬುದ್ಧಿ ಕಡಿಮೆಯವರೆಂದು ಅರ್ಥವಂತೆ.
- ▶ ಬೃಹಸ್ಪತಿ ಆಗಮವನ್ನು ಅನುಸರಿಸಿ ಪೂರ್ವದಲ್ಲಿ ಈದಿನ ನಾವು ಕರೆಯುವ ಹಿಂದೂ ಸಮುದ್ರವನ್ನು **"ಇಂದೂ ಸರೋವರವೆಂದು"** ಕರೆಯುತ್ತಿದ್ದರು.
- ▶ ನೆಹ್ರೂ ತನ್ನ ಮಗಳಾದ ಇಂದಿರಾಗಾಂಧೀಯನ್ನು ಪ್ರೀತಿಯಿಂದ ಇಂದೂ ಎಂದು ಕರೆಯುತ್ತಿದ್ದನು. ಇಂದೂ ಎಂದರೇ **'ಜ್ಞಾನಿ'** ಎಂದು ಅರ್ಥ.
- ▶ ಕಾಶೀ ಇನ್ನೂ ಮುಂತಾದ ನತರಗಳು ಅರ್ಧ ಚಂದ್ರಾಕಾರದ ಆಕೃತಿಯಲ್ಲಿ ಡೊಂಕು ತಿರಿಗಿವೆ. ಚಂದ್ರನನ್ನು **'ಇಂದೂ'** ಎನ್ನುತ್ತಾರೆ.
- ▶ ಹಿಂದೂ ಸಮುದ್ರ ಜ್ಞಾನ ನಿಲಯಕ್ಕೆ ಗುರುತು ಆದ್ದರಿಂದ ಅದನ್ನು ಪೂರ್ವದಲ್ಲಿ **'ಇಂದೂ ಮಹಾ ಸಮುದ್ರ'**ವಾಗಿ ಕರೆಯುತ್ತಿದ್ದರು. (**"ತ್ರೈತಾಕಾರ ರಹಸ್ಯ"** ಎಂಬ ಗ್ರಂಥದಲ್ಲಿ ಇದೆ.)
- ▶ ಭಾರತ ದೇಶ ಪೂರ್ವದಲ್ಲಿ ಜ್ಞಾನವಿರುವ ದೇಶ. ಆದ್ದರಿಂದ ಭಾರತದೇಶವನ್ನು ಇಂದೂ ದೇಶವೆಂದೂ, ಭಾರತೀಯರನ್ನು ಇಂದೂಗಳೆನ್ನುತ್ತಿದ್ದರು.

**visit website : www.thraithashakam.org**

1. ನಾಲ್ಕು ಅಧರ್ಮಗಳು ಶೇ. ಹತ್ತರಷ್ಟು ಮನುಷ್ಯರಲ್ಲಿರುವಾಗ,
ಒಂದು ಮತವೆಂಬ ಅಧರ್ಮ 99 ರಷ್ಟು ಇದೆ.

2. ಯಜ್ಞ, ದಾನ, ವೇದ, ತಪಸ್ಸುಗಳು ನಾಲ್ಕು ಆದಾಗ, ಐದನೆಯ ಅಧರ್ಮ ಮತ.

3. ದೈವ ಮಾರ್ಗಕ್ಕೆ ದೊಡ್ಡ ಆತಂಕ ಮತ.

4. ಎಲ್ಲ ಅಧರ್ಮಗಳನ್ನು ಮೀರಿರುವುದು ಮತವೆಂಬ ಅಧರ್ಮ.

5. ಪ್ರಪಂಚ ಮಾರ್ಗದಲ್ಲಿ ಮತವಿದ್ದರೇ ದೈವ ಮಾರ್ಗದಲ್ಲಿ ಹತವಾಗಿ ಹೋಗುತ್ತೀಯ.

6. ಕಲಿಯುಗದಲ್ಲಿ ಹೊಸದಾಗಿ ಹುಟ್ಟಿ ಬಂದಿರುವ ಐದನೆಯ ಅಧರ್ಮವೇ ಮತ.

ಮತಗಳು ನಿಷೇಧ, ನಿಷಿದ್ಧ. ಕುಲಗಳು ಅಹೇತುಕ, ಅಶಾಸ್ತ್ರೀಯ.

ಭಗವದ್ಗೀತಾ, ಬೈಬಲ್, ಖುರಾನ್ ಮೂರೂ ಒಂದೇ ದೈವಗ್ರಂಥಗಳಲ್ಲಿನ ಭಾಗಗಳೇ.

ನಿಮ್ಮ ಮನೋಭಾವನೆಗಳು ಕುಲಮತಗಳಿಗೆ ಅತೀತವಾದರೇ ಕೂಡಲೇ "ಪ್ರಬೋಧ ಸೇವಾಸಮಿತಿ" ಯಲ್ಲಿ ಸದಸ್ಯರಾಗಿ ಸೇರಿರಿ. ದೇವರು ನಿಮ್ಮನ್ನು ಜ್ಞಾನಿಗಳಾಗಿ ಮಾಡಬೇಕೆಂದು ಕೋರುತ್ತಿರುವ

--ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು

**Cell:09705864675, 09440556968, 9611133635**

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಇಂದೂ ಜ್ಞಾನವೇದಿಕೆ




## ಇಂದೂ ಜ್ಞಾನವೇದಿಕೆ (I.G.V)

**(Regd.No.: 168/2004)**

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@thraithashakam.org

www. thraithashakam.org

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಸುವಾರ್ತ ಕ್ರೈಸ್ತವ ಸಂಘ

SKS

Regd.No:159/2015

## ಸುವಾರ್ತ ಕ್ರೈಸ್ತವ ಸಂಘ (S.K.S)

(Regd.No.: 159/2015)

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@suvarthakraisthavasangham.org

*www. suvarthakraisthavasangham.org*

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಖುದಾ ಇಸ್ಲಾಮಿಕ್ ಸ್ಪಿರಿಚ್ಯುವಲ್ ಸೊಸೈಟೀ

KHUDA ISLAMIC SPIRITUAL SOCIETY

K.I.S.S

(Regd.No.459/20111)

**ಖುದಾ ಇಸ್ಲಾಮಿಕ್ ಸ್ಪಿರಿಚ್ಯುವಲ್ ಸೊಸೈಟೀ (K.I.S.S)**

(Regd.No.: 459/2011)

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@khudaislamicspiritualsociety.org

*www. khudaislamicspiritualsociety.org*

# THRAITHARADHANA



ತ್ರಿಕಾಲಜ್ಞಾನಿ, ಬ್ರಹ್ಮಜ್ಞಾನಿ,
ಶಕ್ತಿ ನಿಲಯ, ಜ್ಞಾನಾಗ್ನಿ

www.thraithashakam.org